# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು
ಎಚ್ಚೆಸ್ಕೆ

ಸಂಪುಟ ೭
★
ಸಂಚಿಕೆ ೪

ಡಿಸೆಂಬರ್
೧೯೮೬

ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕಿಂಗ್ ಪ್ರಪಂಚ

ಸಂಪುಟ ೭ ಡಿಸೆಂಬರ್ ೧೯೮೬ ಸಂಚಿಕೆ ೪

ಸಂಪಾದಕ
**ಎಚ್ಚೆಸ್ಕೆ**



ಸಮನ್ವಯ ಸಮಿತಿ: ಆಡಳಿತ ವರ್ಗ
**1986-87**



ಅಧ್ಯಕ್ಷ
ಮೇ. ಕೃ. ಅನಂತಸ್ವಾಮಿ



ಉಪಾಧ್ಯಕ್ಷರು
ಶಂಕರ ಜಾಲವಾದಿ
ಬೆಂ. ಶ್ರೀ. ರವೀಂದ್ರ



ಪ್ರಧಾನ ಕಾರ್ಯದರ್ಶಿ ಹಾಗೂ ಪ್ರಕಾಶಕ
ಪಾ. ರಾಜಗೋಪಾಲ



ಉಪ ಪ್ರಧಾನ ಕಾರ್ಯದರ್ಶಿಗಳು
ಟಿ. ಕೆ. ರಂಗನಾಥ
ಚಿ. ರಾ. ವೇಣುಗೋಪಾಲ
ಜಿ. ಎನ್. ನರಸಿಂಹಮೂರ್ತಿ

ಕಛೇರಿ ಕಾರ್ಯದರ್ಶಿ
ಕೆ. ಎನ್. ಮಹಾಬಲ



ಖಜಾಂಚಿ
ಕ. ನ. ಜಯರಾಮ

ಉಪ ಖಜಾಂಚಿ
ಕೃಷ್ಣಪ್ರಸಾದ್



ಆಂತರಿಕ ಲೆಕ್ಕ ಪರಿಶೋಧಕ
ಸುದರ್ಶನ



ವಾರ್ಷಿಕ ಚಂದಾ: ರೂ. 12
ಅಜೀವ ಚಂದಾ: ರೂ. 150

## ಲೇಖಕರಿಗೆ ಸೂಚನೆಗಳು

'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟನೆಗಾಗಿ ಹಣ, ಬ್ಯಾಂಕಿಂಗ್ ಮತ್ತು ತತ್ಸಂಬಂಧದ ವಿಷಯಗಳನ್ನು ಕುರಿತ ಲೇಖನಗಳಿಗೆ ಸ್ವಾಗತವಿದೆ.

ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೇ ಅನುವಾದಗಳಾಗಿರಬಹುದು. ಲೇಖನ ಅನುವಾದವಾಗಿದ್ದರೆ ಮೂಲ ಲೇಖನದ ಶೀರ್ಷಿಕೆ, ಮೂಲ ಲೇಖಕರ ಹೆಸರು ಮತ್ತು ವಿಳಾಸ, ಮೂಲ ಲೇಖನ ಪ್ರಕಟವಾಗಿದ್ದರೆ ಆ ಬಗ್ಗೆ ವಿವರಗಳು ಇವನ್ನೂ ಅನುವಾದ ಮಾಡಿ ಪ್ರಕಟಿಸಲು ಮೂಲ ಲೇಖಕರ ಅನುಮತಿಯನ್ನೂ ಅನುವಾದದೊಂದಿಗೆ ಕಳುಹಿಸಿಕೊಡಬೇಕು.

ಲೇಖಕರು ಲೇಖನವನ್ನು ಕಾಗದದ ಒಂದೇ ಮಗ್ಗುಲಿನಲ್ಲಿ ಸ್ಫುಟವಾಗಿ ಬರೆದಿರಬೇಕು. ಪುಟದ ಎಡಬದಿಯಲ್ಲಿ ಸಾಕಷ್ಟು ಅಂಚು ಬಿಟ್ಟಿರಬೇಕು. ಒಂದು ಸಾಲಿಗೂ ಇನ್ನೊಂದು ಸಾಲಿಗೂ ನಡುವೆ ಧಾರಾಳವಾಗಿ ಸ್ಥಳ ಬಿಟ್ಟಿರಬೇಕು.

ಲೇಖಕರು ತಮ್ಮ ಹೆಸರು ವಿಳಾಸಗಳನ್ನೂ ತಮ್ಮ ಸಂಕ್ಷಿಪ್ತ ಪರಿಚಯವನ್ನೂ ಲೇಖನದೊಂದಿಗೆ ಕಳುಹಿಸಿಕೊಡಬೇಕು. ಈ ವಿವರಗಳಿಲ್ಲದ ಲೇಖನಗಳನ್ನು ಪ್ರಕಟಿಸಲಾಗುವುದಿಲ್ಲ.

ಲೇಖನವನ್ನು ಪ್ರಕಟಿಸುವ ಅಥವಾ ಬಿಡುವ, ಯುಕ್ತವೆನಿಸಿದ ಮಾರ್ಪಾಟು ಮಾಡಿ ಪ್ರಕಟಿಸುವ ಅಧಿಕಾರ ಸಂಪಾದಕರಿಗುಂಟು.

ಪ್ರಕಟವಾಗದ ಲೇಖನಗಳನ್ನು ಹಿಂದಿರುಗಿಸಲು ವ್ಯವಸ್ಥೆಯಿಲ್ಲ. ಲೇಖಕರು ಪ್ರಕಟನೆಗಾಗಿ ಕಳುಹಿಸುವ ಲೇಖನದ ಪ್ರತಿಯೊಂದನ್ನು ತಮ್ಮ ಬಳಿ ಇಟ್ಟುಕೊಳ್ಳುವುದು ಒಳ್ಳೆಯದು.

ಬ್ಯಾಂಕಿಂಗ್ ಪ್ರಪಂಚದಲ್ಲಿ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ಅದರ ಎರಡು ಪ್ರತಿಗಳನ್ನು ಕಳುಹಿಸಿಕೊಡಬೇಕು.

ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟವಾದ ಲೇಖನಗಳ ಬಗ್ಗೆ ಅಭಿಪ್ರಾಯಗಳನ್ನು ಪ್ರಕಟನೆಗಾಗಿ ಬರೆದು ಕಳುಹಿಸಬಹುದು. ಇವು ಸಣ್ಣವಾಗಿರಬೇಕು. ಅಭಿಪ್ರಾಯಗಳೊಂದಿಗೆ ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಬರೆದಿರಬೇಕು.

ಈ ಪತ್ರಿಕೆಯಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯಗಳು ಆಯಾ ಲೇಖಕರವು. ಇವನ್ನು ಸಂಪಾದಕರಾಗಲಿ ಪ್ರಕಾಶಕರಾಗಲಿ ಒಪ್ಪಿರುತ್ತಾರೆ ಎಂದೇನೂ ಅಲ್ಲ.

## 'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು

(ಹಿಂದಿನ ಸಂಚಿಕೆಯಿಂದ ಮುಂದುವರಿದ ಪಟ್ಟಿ)

497 ಎ. ವಿ. ಪ್ರಕಾಶ್
498 ಕೆ. ಪ್ರಕಾಶ್
499 ಕೆ. ವಿ. ಮಾಲ
500 ಬಿ. ಜಿ. ರಂಗನಾಥ್
501 ಬಿ. ಎನ್. ಪ್ರಭಾಶಂಕರ್
502 ಟಿ. ಗಣೇಶರಾವ್
503 ಎಚ್. ಬಿ. ವೈದ್ಯ
504 ಬಿ. ಇ. ರಮೇಶ್
505 ಬಿ. ಎಸ್. ಶಿವರುದ್ರಪ್ಪ
506 ಎ. ಎಸ್. ಬಸವರಾಜು
507 ನಂದತೋರ್ಗಲ್
508 ಎಂ. ವಿ. ಕುಲಕರ್ಣಿ
509 ಎನ್. ವಿ. ದಲ್ಲಾಲ್
510 ಜಿ. ವಿ. ಬಲಿಪಾಡಿ
511 ಎಸ್. ಪ್ರಹ್ಲಾದರಾವ್
512 ಎಂ. ಜಿ. ತಂಬಾಕಿ
513 ಸಿಬ್ಬಂದಿ ತರಬೇತಿ ಕೇಂದ್ರ
ಭಾರತೀಯ ಸ್ಟೇಟ್ ಬ್ಯಾಂಕ್, ಮಂಗಳೂರು
514 ಭಾರತೀಯ ಸ್ಟೇಟ್ ಬ್ಯಾಂಕ್
ಕೃಷಿ ಅಭಿವೃದ್ಧಿ ಶಾಖೆ, ನವಲಗುಂದ
515 ಪಿ. ಎ. ದೇಶಪಾಂಡೆ

---

ಈ ಸಂಚಿಕೆಯ ಜಾಹೀರಾತುಗಳನ್ನು ಒದಗಿಸಿಕೊಟ್ಟಿದ್ದಕ್ಕಾಗಿ

ಕನ್ನಡ ಸಾಂಸ್ಕೃತಿಕ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಬಳ್ಳಾರಿ

ಇವರಿಗೆ ವಿಶೇಷ ಕೃತಜ್ಞತೆಗಳು

---

## ಬ್ಯಾಂಕಿಂಗ್ ಪ್ರತಿಷ್ಠಾನ

(ಪ್ರಾಯೋಜಕರು, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ)

* ಕನ್ನಡದಲ್ಲಿ ಬ್ಯಾಂಕಿಂಗ್ ಬಗ್ಗೆ ಅಧ್ಯಯನ, ಸಂಶೋಧನೆ ಮತ್ತು ಪ್ರಸಾರಕ್ಕೆ ಮೀಸಲಾದ ಒಂದು ನ್ಯಾಸ
* ಇದರ ಅಂಗವಾಗಿ ಕನ್ನಡದಲ್ಲಿ ಏಕರೂಪವನ್ನು ತರಲು ತಜ್ಞರ ಸಮಿತಿ "ಬ್ಯಾಂಕಿಂಗ್ ಪದನಿಧಿ"ಯ ರಚನೆ
* ಬ್ಯಾಂಕಿಂಗ್ ಮಾಹಿತಿಯನ್ನು ಅನುವಾದಿಸುವ ಕಾರ್ಯ

ಇದರ ಮೊದಲ ಪ್ರಕಟಣೆ

**'ಕರ್ನಾಟಕದಲ್ಲಿ ಬ್ಯಾಂಕುಗಳ ಹುಟ್ಟು ಮತ್ತು ಬೆಳವಣಿಗೆ'**

56 ಪುಟಗಳು  1/8 ಕ್ರೌನ್ ಆಕೃತಿ  ಹೊಳಪಿನ ರಕ್ಷಾ ಕವಚ  ಬೆಲೆ ರೂ. 5-00

ಲೇಖಕರು

**ಡಾ|| ನವೀನಚಂದ್ರ ಕೃ. ತಿಂಗಳಾಯ**

ಉಪ-ಪ್ರಧಾನ ವ್ಯವಸ್ಥಾಪಕರು

ಸಿಂಡಿಕೇಟ್ ಬ್ಯಾಂಕ್

ಮಣಿಪಾಲ

("ಪ್ರತಿಗಳಿಗೆ ಬ್ಯಾಂಕಿಂಗ್ ಪ್ರತಿಷ್ಠಾನ"ದ ಹೆಸರಿಗೆ ಬರೆದ ಡ್ರಾಫ್ಟ್/ಚೆಕ್ಕುಗಳ ಮೂಲಕ ಹಣ ಕಳುಹಿಸಿ)

**ಬ್ಯಾಂಕಿಂಗ್ ಪ್ರತಿಷ್ಠಾನ**

ಕನ್ನಡ ಸಂಘ

ಆಶ್ರಯ : ಭಾರತೀಯ ಸ್ಟೇಟ್ ಬ್ಯಾಂಕ್

ಬೆಂಗಳೂರು ನಗರ ಶಾಖೆ

22, ಜಯಚಾಮರಾಜ ರಸ್ತೆ, ಬೆಂಗಳೂರು 560 002

# ಸಂಪಾದಕೀಯ

### ಮೇಳದ ಅಪಸ್ವರ

ನಮ್ಮಲ್ಲಿ ಆದರ್ಶಗಳಿಗೇನೂ ಕೊರತೆಯಿಲ್ಲ. ನಾವು ಏನನ್ನೇ ಮಾಡಲಿ, ಅದರ ಹಿಂದಣ ಸದುದ್ದೇಶಗಳನ್ನು ಜಗತ್ತಿಗೆ ಘೋಷಿಸಿ ಕೊಳ್ಳುವುದು ನಮಗೆ ಹಿಂದಿನಿಂದ ಬಂದಿರುವ ಅಭ್ಯಾಸ. ಇದರ ಲ್ಲೇನೂ ತಪ್ಪಿಲ್ಲ. ನಮ್ಮ ಎಲ್ಲ ಯೋಜನೆಗಳೂ ಸದುದ್ದೇಶಪೂರಿತವೇ. ನರಕದ ನಿರ್ಮಾಣವಾಗಿರತಕ್ಕದ್ದು ಕೂಡ ಒಳ್ಳೆಯ ಉದ್ದೇಶ ಗಳಿಂದಲೇ. ನರಕದ ನೆಲಗಟ್ಟು ಒಳ್ಳೆಯ ಉದ್ದೇಶಗಳೇ ಎಂಬುದು ಸಂತ ಬರ್ನಾರ್ಡನ ವಾಣಿ.

ಆದರೆ ಉದ್ದೇಶ ಒಳ್ಳೆಯದಾಗಿದ್ದ ಮಾತ್ರಕ್ಕೆ ಫಲವೂ ಒಳ್ಳೆಯ ದಾಗಿರಬೇಕೆಂದೇನೂ ಅಲ್ಲ. ಉದ್ದೇಶಕ್ಕೂ ಫಲಕ್ಕೂ ಇರುವ ಅಂತರ ಬಲು ದೊಡ್ಡದು. ಉದ್ದೇಶವೇನೇ ಇರಲಿ, ಅದನ್ನು ಸಾಧಿಸಲು ಯಾವ ಮಾರ್ಗ ಅನುಸರಿಸುತ್ತೇವೆಂಬುದೂ ಮುಖ್ಯವೇ, ಅನೇಕ ವೇಳೆ ನಾವು ಅನುಸರಿಸುವ ಮಾರ್ಗವೇ ಗುರಿಯನ್ನು ದೂರ ಮಾಡಬಹುದು, ಆದ್ದರಿಂದ ಗುರಿ ತಪ್ಪಲೂಬಹುದು. ನಾವು ಬಯಸದ, ನಾವು ನಿರೀಕ್ಷಿಸದ ಏನೇನೋ ಆಗಿಬಿಡಬಹುದು.

ಬಡ ಜನರ ಉದ್ಧಾರಕ್ಕಾಗೆಂದು ನಮ್ಮ ದೇಶದಲ್ಲಿ ಏರ್ಪಡಿಸ ಲಾಗುತ್ತಿರುವ ಸಾಲ ಮೇಳಗಳನ್ನು ನೋಡಿದಾಗ ಈ ಭಾವ ಮೂಡುವುದು ಸಹಜ. ಸಾಲಮೇಳಗಳನ್ನೇರ್ಪಡಿಸುವುದರಲ್ಲಿ ಏನು ತಪ್ಪಿದೆ ಎಂಬ ಪ್ರಶ್ನೆಗೆ ಯಾರೂ ಏನನ್ನೂ ಹೇಳಲಾರರು. ಮೇಳದ ಕಲ್ಪನೆ ನಮಗೇನೂ ಹೊಸದಲ್ಲ. ಯಾವುದೇ ವಿಚಾರ ಅಥವಾ ಚಳವಳಿ ದೇಶವ್ಯಾಪಿಯಾಗಲು ಮೇಳ ಒಂದು ಸಾಧನ. ನೇತ್ರ ಚಿಕಿತ್ಸಾ ಶಿಬಿರಗಳೂ ಕುಟುಂಬ ಯೋಜನಾ ಶಿಬಿರಗಳೂ ನಿದರ್ಶನಗಳು. ಜನಸಾಮಾನ್ಯರನ್ನು ದಾರಿದ್ರ್ಯ ರೇಖೆಯಿಂದ ಮೇಲಕ್ಕೆತ್ತಲು ಈಗ ಸಾಲ ಮೇಳಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಯಥಾಕ್ರಮದಿಂದ ಯಾವುದನ್ನು ವ್ಯಾಪಕವಾಗಿ ಸಾಧಿಸಲಾಗುವುದಿಲ್ಲವೋ, ಯಾವುದನ್ನು ಶೀಘ್ರಾತಿಶೀಘ್ರವಾಗಿ ಸಾಧಿಸಬೇಕೋ ಅದನ್ನು ಮೇಳದ ಮೂಲಕ ಸಾಧಿಸಬೇಕೆಂದು ಹೊರಟಿರುವುದರಲ್ಲಿ ನಾವೀನ್ಯವೇನೂ ಇಲ್ಲ. ಇದು ಜನಮನವನ್ನು ತಟ್ಟಬಲ್ಲುದು ; ಜಡತೆಯನ್ನು ನೀಗಿಸಿ ಕಾರ್ಯದಲ್ಲಿ ತೊಡಗುವಂತೆ ಸಂಬಂಧಪಟ್ಟವರನ್ನು ಪ್ರಚೋದಿಸ ಬಲ್ಲುದು. ಆರನೆಯ ಯೋಜನೆಯ ಅಡಿಯಲ್ಲಿ ಆರಂಭಿಸಿದ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಫಲ 150 ಲಕ್ಷ ಕುಟುಂಬಗಳಿಗೆ ದೊರಕಬೇಕೆಂಬುದು ಗುರಿಯಾಗಿತ್ತು ; ಅಧಿಕೃತ ಅಂಕಿಅಂಶಗಳ ಪ್ರಕಾರ ಇದು 164 ಲಕ್ಷ ಕುಟುಂಬಗಳಿಗೆ ದೊರಕುವಂತಾದ್ದೂ ಸಾಲ ಮೇಳಗಳಿಂದ ಎಂಬುದು ನಮ್ಮ ಕೇಂದ್ರದ ಹಣಕಾಸು ರಾಜ್ಯ ಮಂತ್ರಿಗಳ ವಾದ. ಉದರಿ ನೀಡಿಕೆಗಾಗಿ ಮೇಳಗಳನ್ನಾರಂಭಿಸಿದ ಮೇಲೆಯೇ ಇದು ವೇಗವಾಗಿ ಸಾಗತೊಡಗಿದ್ದು ; ಸಾಲ ಮೇಳಗಳ ನ್ನೇರ್ಪಡಿಸದಿದ್ದರೆ ಆರನೆಯ ಯೋಜನೆಯ ಗುರಿಯ ಸಾಧನೆ ಯಾಗದೆಯೇ ಹೋಗುತ್ತಿತ್ತು ಎಂಬುದು ಅವರ ನಂಬಿಕೆ.

### ವಾದದ ಸುಳಿ

ನಮ್ಮ ಬಡ ಜನರ ನಿಜವಾದ ಸಮಸ್ಯೆಯೆಂದರೆ ಹಣದ್ದೇ ಎಂಬುದು, ಹಣವನ್ನು ಕೊಟ್ಟರೆ ಎಲ್ಲವೂ ಸರಿಹೋಗಿಬಿಡುತ್ತದೆ ಎಂಬುದು ಪ್ರಶ್ನಾರ್ಹವಾದ್ದು. ಕೊಟ್ಟ ಸಾಲ ವಸೂಲಾಗುವುದೆಂದು ದೃಢ ಪಡಿಸಿಕೊಂಡೇ, ಅದಕ್ಕೆ ಯಥೋಚಿತ ಆಧಾರ ಪಡೆದೇ ಸಾಲ ನೀಡುವುದು ಬ್ಯಾಂಕಿಂಗ್ ವ್ಯವಹಾರದಲ್ಲಿ ಲಾಗಾಯ್ತಿನಿಂದ ಬೆಳೆದು ಬಂದಿರುವ ಒಂದು ಪರಿಕಲ್ಪನೆ. ಕೊಟ್ಟ ಸಾಲದ ವಸೂಲಿಗೆ ಬೆಂಬಲ ವಾಗಿ ಆಧಾರ ಇರಬೇಕೆಂಬುದಕ್ಕಿಂತ, ಕೊಟ್ಟ ಸಾಲದಿಂದ ಸಾಲಗಾರ ಸ್ವಾವಲಂಬಿಯಾಗಿ ಬೆಳೆದು ಆ ಸಾಲವನ್ನು ತೀರಿಸುವ ಸಾಮರ್ಥ್ಯ ಗಳಿಸಬೇಕೆಂಬುದು ಸ್ವೀಕಾರಾರ್ಹ ಪರಿಕಲ್ಪನೆ ಎಂಬುದನ್ನೂ ಒಪ್ಪ ಬಹುದು. ಆದರೆ ಈಗ ಮೇಳಗಳ ಮೂಲಕ ನೀಡುತ್ತಿರುವ ಸಾಲ ದಿಂದ ಈ ಉದ್ದೇಶ ಎಷ್ಟರಮಟ್ಟಿಗೆ ಸಾಧಿತವಾಗುತ್ತಿದೆ, ಈ ಗುರಿ ಸಾಧನೆಗೆ ಅನುಗುಣವಾಗಿ ಸಾಲ ನೀಡಿಕೆಯ ವಿಧಾನಗಳನ್ನೂ ಅದರ ಉಪಯೋಗದ ಉಪಾಯಗಳನ್ನೂ ರೂಪಿಸಲಾಗಿದೆಯೆ, ನೀಡಿದ ಸಾಲದ ಸದುಪಯೋಗವಾಗುವುದೆಂದು ಖಾತರಿಪಡಿಸಿಕೊಳ್ಳಲು ಏನು ಮಾರ್ಗ ಅನುಸರಿಸಲಾಗುತ್ತಿದೆ, ಮತ್ತು ಈ ಎಲ್ಲ ಹೊಣೆ ಹೊರಬೇಕಾದ ಬ್ಯಾಂಕ್ ವ್ಯವಸ್ಥೆ ಹಾಗೂ ಅದರ ಸಿಬ್ಬಂದಿಯಲ್ಲಿ ಎಷ್ಟರ ಮಟ್ಟಿಗೆ ಈ ಕಾರ್ಯಕ್ಕೆ ತಕ್ಕ ಸಾಮರ್ಥ್ಯ ಇದೆ, ಎಷ್ಟರ ಮಟ್ಟಿಗೆ ಈ ನಿಟ್ಟಿನಲ್ಲಿ ಸ್ವತಂತ್ರವಾಗಿ ವರ್ತಿಸಲು ಯುಕ್ತವಾದ ವಾತಾವರಣ ಸೃಷ್ಟಿಯಾಗಿದೆ ಎಂಬ ಹಲವು ಹನ್ನೊಂದು ಪ್ರಶ್ನೆ ಗಳಿಗೆ ಸಮರ್ಪಕವಾದ ಉತ್ತರಗಳಿಲ್ಲ. ಅಂತೆಯೇ ಸಾಲಮೇಳಗಳು ಆರಂಭವಾದಾಗಿನಿಂದಲೂ ಇವುಗಳ ಬಗ್ಗೆ ಹಲವಾರು ಟೀಕೆಗಳು ಬರುತ್ತಲೇ ಇವೆ. ಕೆಲವರು ಈ ಪರಿಕಲ್ಪನೆಯ ಬಗೆಗೇ ಸಂದೇಹ ವ್ಯಕ್ತಪಡಿಸಿದರೆ, ಇನ್ನು ಕೆಲವರು ಇವುಗಳ ಸಂಘಟನೆಯ ವಿಧಾನ ವನ್ನು ಪ್ರಶ್ನಿಸುತ್ತಿದ್ದಾರೆ. ಒಟ್ಟಿನಲ್ಲಿ ಸಾಲಮೇಳಗಳು ಭಾರಿ ವಾದ ಪ್ರತಿವಾದಗಳ ಕೋಲಾಹಲವನ್ನೇ ಎಬ್ಬಿಸಿವೆ.

ಸಾಲ ಮೇಳಗಳ ಫಲಾನುಭವಿಗಳ ಗುರುತಿಸುವಿಕೆ, ಸಾಲದ ಹಂಚಿಕೆ ಮುಂತಾದವು ದೋಷದೂರವಾಗಿ ನಡೆಯುತ್ತಿವೆಯೆಂದು ಹೇಳಲಾಗುವುದಿಲ್ಲ. ಇವುಗಳಲ್ಲಿ ಬಹಳಷ್ಟು ರಾಜಕೀಯ ಬೆರೆತಿದೆ. ಸಾಲಕ್ಕೆ ಅರ್ಹರಾದವರು ಯಾರೆಂಬುದನ್ನು ಗುರುತಿಸುವಲ್ಲಿ ಕೇಂದ್ರ ಸರ್ಕಾರ ಸಂಬಂಧಪಟ್ಟ ರಾಜ್ಯ ಸರ್ಕಾರಗಳನ್ನು ತನ್ನ ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಿಲ್ಲವೆಂಬ ದೂರುಗಳು ಬರುತ್ತಲೇ ಇವೆ. ಕರ್ನಾಟಕದಲ್ಲಂತೂ ರಾಜ್ಯ ಸರ್ಕಾರ ಈ ವಿಚಾರದಲ್ಲಿ ಬಹಳ ಅಸಮಾಧಾನಗೊಂಡಿದೆ. ಸಾಲ ಮೇಳಗಳಲ್ಲಿ ತನ್ನ ಅಧಿಕಾರಿಗಳು ಭಾಗವಹಿಸಬಾರದೆಂದು ರಾಜ್ಯ ಸರ್ಕಾರ ಸೂಚನೆ ನೀಡಿದೆಯೆಂದು ವರದಿಯಾಗಿದೆ. ಈಚೆಗೆ ರಾಜ್ಯದಲ್ಲಿ ನಡೆದ ಉಪಚುನಾವಣೆಗಳ ಸಮಯದಲ್ಲಿ ರಾಜ್ಯದಲ್ಲಿ ಭಾರಿ ಸಾಲ ಮೇಳಗಳನ್ನು ಸಂಘಟಿಸಿದ್ದು ದುಂಟು. ಸಾಲ ಮೇಳಗಳು ಬೇಕೆಂದರೆ ಜನ ನಮಗೆ ಮತ ಕೊಡು ತ್ತಾರೆ ಎಂಬ ರೀತಿಯಲ್ಲಿ ಕೇಂದ್ರದ ವರಿಷ್ಠರು ಸವಾಲು ಹಾಕಿದ ರೆಂದೂ ಹೇಳಲಾಗಿದೆ. ಯಾವುದು ನಿಜವಾಗಿ ಆರ್ಥಿಕೋದ್ದೇಶ ದಿಂದ ಸಂಘಟಿತವಾಗಬೇಕೋ ಅದು ರಾಜಕೀಯ ವಾದದ ಸುಳಿ ಯಾಗಿರುವುದು ಅತ್ಯಂತ ದುರ್ದೈವದ ಸಂಗತಿ.

### ಸರ್ವಾಧಿಕಾರದ ಧ್ವನಿ

ಬ್ಯಾಂಕುಗಳ ವ್ಯವಸ್ಥಾಪಕವರ್ಗವೂ, ಬ್ಯಾಂಕ್ ಸಿಬ್ಬಂದಿಯಲ್ಲಿ ಒಂದು ಭಾಗವೂ ಸಾಲ ಮೇಳದಲ್ಲಿ ಮನಃಪೂರ್ವಕವಾಗಿ ಭಾಗವಹಿಸುತ್ತಿಲ್ಲ ವೆಂದು ನಮ್ಮ ರಾಜಕೀಯ ಧುರೀಣರಿಗೆ ಅಸಮಾಧಾನ. ಗ್ರಾಮೀಣ ಹಾಗೂ ಪಟ್ಟಣದ ಬಡಜನರ ಉದ್ಧಾರದಲ್ಲಿ ಈ ವರ್ಗಗಳ ಜನಕ್ಕೆ

ಆಸಕ್ತಿಯಿಲ್ಲ ಎಂದು ಆಕ್ಷೇಪಿಸಲಾಗಿದೆ. ಈ ನಿಟ್ಟಿನಲ್ಲಿ ಮನಃಪೂರ್ವಕವಾಗಿ ಸಹಕರಿಸದವರನ್ನು ಪಂಜಾಬಿಗೆ ವರ್ಗ ಮಾಡುವುದಾಗಿ ಬೆದರಿಕೆ ಬಂದಿದೆ. ಪಂಜಾಬು ಭಾರತದ ಭಾಗವಲ್ಲ; ಅಲ್ಲಿಗೆ ವರ್ಗ ಮಾಡುವುದು ಒಂದು ರೀತಿಯಲ್ಲಿ ಗಡಿಪಾರು ಶಿಕ್ಷೆ ಎಂಬ ರೀತಿಯಲ್ಲಿ ಈ ವರಿಷ್ಠರು ಭಾವಿಸುವಂತಿದೆ. ತಮ್ಮ ಮಾತಿನ ಅರ್ಥವೇನೆಂಬುದನ್ನು, ಅದರಲ್ಲಿ ಅಡಗಿರುವ ಧ್ವನಿಯ ಅಪಾಯವನ್ನು ಅವರೇ ಅರಿತಿಲ್ಲದಿರುವುದು ವಿಷಾದಕರ. ಕರ್ನಾಟಕಕ್ಕೆ ಭಾರತೀಯ ಸ್ಟೇಟ್ ಬ್ಯಾಂಕಿನ ವಲಯ ಕಛೇರಿ ಬಂದದ್ದು ತಮ್ಮಿಂದಾಗಿ; ಈಗ ಇದನ್ನು ಮುಚ್ಚಿಬಿಡಲು ತಾವು ತೀರ್ಮಾನ ತೆಗೆದುಕೊಳ್ಳಬಲ್ಲರು ಎಂಬ ಮಾತಿನಲ್ಲಿ ಸರ್ವಾಧಿಕಾರದ ಧ್ವನಿಯಿದೆ. ಯಾರೊಬ್ಬರನ್ನು ಅಥವಾ ಯಾವೊಂದು ವರ್ಗವನ್ನು ಒಲಿಸಲು ಅಥವಾ ಮಣಿಸಲು ಒಬ್ಬ ಮಂತ್ರಿ ಇಂಥ ತೀರ್ಮಾನಗಳನ್ನು ತೆಗೆದುಕೊಳ್ಳಬಲ್ಲರೆಂಬುದಾದರೆ, ಇಡೀ ರಾಜ್ಯದ ಹಿತದ ಪ್ರಶ್ನೆಯನ್ನು ಕಡೆಗಣಿಸಬಲ್ಲರೆಂದಾದರೆ, ಅದು ನಮ್ಮ ಪ್ರಜಾಪ್ರಭುತ್ವದ ನಿಜಸ್ಥಿತಿಗೆ, ಅದರಲ್ಲಿ ನಮ್ಮ ನಾಯಕರು ಎಂಥ ಪಾತ್ರವಹಿಸುತ್ತಾರೆಂಬುದಕ್ಕೆ ಸಾಕ್ಷಿಯಾಗಿದೆ. ಇದು ಆರೋಗ್ಯಕರ ಚಿಹ್ನೆಯಲ್ಲ. ಇಂಥ ಭಾವನೆಗಳನ್ನು ವ್ಯಕ್ತಪಡಿಸಲು ನಮ್ಮ ನಾಯಕರು ನಾಚಬೇಕು.

### ಕಂಚಿನ ಅಂಗಡಿಯಲ್ಲಿ ಆನೆ

ಹೀಗೆಂದರೆ ಅಸಹಕಾರಿ ಮನೋಭಾವದ ವ್ಯವಸ್ಥಾಪಕ ಹಾಗೂ ಸಿಬ್ಬಂದಿ ವರ್ಗದ ಪರವಾಗಿ ಈ ಮಾತು ಬರೆಯಲಾಗುತ್ತಿದೆಯೆಂದು ಯಾರೂ ತಿಳಿಯಬಾರದು. ನಮ್ಮ ವರಿಷ್ಠರು ಯಾವುದೇ ಹೇಳಿಕೆ ನೀಡುವ ಮೊದಲು ಅದರ ಪರಿಣಾಮಗಳೇನೆಂಬುದನ್ನು ಕುರಿತು ಚಿಂತಿಸುವುದು ಅಗತ್ಯ. ಬಡ ಜನಕ್ಕೆ ಬ್ಯಾಂಕುಗಳಿಂದ ಉಪಕಾರವಾಗಬೇಕು ಎಂಬುದಕ್ಕೆ ಯಾರೂ ವಿರೋಧ ವ್ಯಕ್ತಪಡಿಸಲಾರರು. ಆದರೆ ಈಗ ಅನುಸರಿಸುತ್ತಿರುವ ವಿಧಾನಗಳಿಂದ ಆ ಉದ್ದೇಶ ಸಫಲವಾಗುತ್ತಿದೆಯೆ ಎಂಬುದನ್ನು ನೋಡಬೇಕು. ಸಾಲ ಮೇಳಗಳು ಕೇವಲ ಪ್ರಚಾರದ ಅಥವಾ ಅಪಪ್ರಚಾರದ ಸಾಧನಗಳಾಗಬಾರದು. ಯಾರ ಮೂಲಕ ಈ ಸಾಲ ಮೇಳಗಳು ಯಶಸ್ವಿಯಾಗಬೇಕೋ ಅವರ ಬಹಿರಂಗ ಅವಹೇಳನಗಳಿಂದ ಖಂಡಿತ ಅವು ಸಫಲವಾಗವು. ಬ್ಯಾಂಕುಗಳು ಸಾರ್ವಜನಿಕ ಸಂಸ್ಥೆಗಳು. ಜನತೆಯ ಠೇವಣಿಗಳಿಂದ ಅವು ಬದುಕಬೇಕಾದವು, ಬೆಳೆಯಬೇಕಾದವು. ಜನತೆಯ ಉಳಿತಾಯಗಳ ಸಂಗ್ರಹಣೆ ವಿತರಣೆಗಳನ್ನು ನಿರ್ವಹಿಸುವ, ಉಳ್ಳವರಿಂದ ಪಡೆದದ್ದನ್ನು ಇಲ್ಲದವರಿಗೆ ಹಂಚುವ, ತನ್ಮೂಲಕ ಬಂಡವಾಳ ಶೇಖರಣೆಗೆ ಹಾಗೂ ಉತ್ಪಾದಕ ಕಲಾಪಗಳಲ್ಲಿ ಅದನ್ನು ತೊಡಗಿಸುವುದಕ್ಕೆ ಸಾಧನವಾಗಿರುವ, ಈ ಪ್ರಕ್ರಿಯೆಯಲ್ಲಿ ಹಣ ನಿರ್ಮಾಣದ ಸಾಮರ್ಥ್ಯವನ್ನು ಕೂಡ ಪಡೆದಿರುವ ಬ್ಯಾಂಕುಗಳು ಉದ್ಯಮ ಸಂಸ್ಥೆಗಳಾದ್ದರಿಂದ ತಮ್ಮ ಸಾಂಸ್ಥಿಕೋದ್ದೇಶಗಳಿಗೂ, ಅವನ್ನು ಸಾಧಿಸಲು ನಿಯೋಜಿಸಲಾದ ವಿಧಿವಿಧಾನಗಳಿಗೂ ಬದ್ಧವಾಗಿ ಅವು ಕಾರ್ಯ ನಿರ್ವಹಿಸಬೇಕು. ಬ್ಯಾಂಕುಗಳು ಆದಿಕಾಲದಿಂದ ಬೆಳೆದುಕೊಂಡು ಬಂದ ಪರಂಪರೆ ಹಾಗೂ ಪದ್ಧತಿಗಳನ್ನೂ ಬಿಡಲಾರವು. ಇವನ್ನು ರಾಷ್ಟ್ರೀಕರಿಸಿ, ಇವಕ್ಕೆ ಸಾಮಾಜಿಕೋದ್ದೇಶವನ್ನೇನೋ ಜೋಡಿಸಲಾಯಿತು. ರಾಷ್ಟ್ರೀಕರಣವೆಂದರೆ ಯಾರೋ ಕೆಲವರ ಸ್ವತ್ತಾಗಿರುವುದನ್ನು ರಾಷ್ಟ್ರದ ಸ್ವತ್ತಾಗಿಸುವುದು. ಅದರ ಫಲಾನುಭವ ಎಲ್ಲರಿಗೂ ಸಾಮಾನ್ಯವಾಗಿ ದೊರಕುವಂತೆ ಮಾಡುವುದು. ಅದು ಯಾವುದೇ ಆಳುವ ಪಕ್ಷದ ಅಥವಾ ವರ್ಗದ ಸ್ವತ್ತಾಗತಕ್ಕದ್ದಲ್ಲ. ಬ್ಯಾಂಕುಗಳು ಸರ್ಕಾರಿ ಬ್ಯಾಂಕುಗಳಲ್ಲ. ಹಾಗಾದರೆ ಸರ್ಕಾರಿ ಇಲಾಖೆಗಳಿಗೂ ಅವಕ್ಕೂ ವ್ಯತ್ಯಾಸ ಇರಲಾರದು. ಬ್ಯಾಂಕುಗಳು ಸ್ವತಂತ್ರ ಉದ್ಯಮ ಸಂಸ್ಥೆಯ ಎಲ್ಲ ಲಕ್ಷಣಗಳನ್ನೂ ಉಳಿಸಿಕೊಂಡು ಸಾರ್ವಜನಿಕ ಉದ್ದೇಶಗಳನ್ನೂ ಸಾಧಿಸುವಂತೆ ಕೆಲವು ಮಾನದಂಡಗಳನ್ನು ರೂಪಿಸಬೇಕು. ಅವಕ್ಕೆ ಅನುಗುಣವಾಗಿ ಬ್ಯಾಂಕುಗಳು ನಡೆದುಕೊಳ್ಳುವಂತೆ ಮಾಡಬೇಕು. ಬ್ಯಾಂಕುಗಳು ಹಳೆಯ ರೀತಿಯಲ್ಲೇ, ನೀಡಿದ ಸಾಲಕ್ಕೆ ಆಧಾರ ಇರುವಂತೆ, ನಡೆಯಬೇಕೆಂದು ಹೇಳದಿರಬಹುದು. ಆದರೆ ಅವು ನೀಡಿದ ಸಾಲ ಉತ್ಪಾದಕವಾಗಿರಬೇಕು. ಸಾಲ ಪಡೆದಾತ ಅದನ್ನು ಬಳಸಿಕೊಂಡು ಜೀವನ ಗುಣಮಟ್ಟವನ್ನು ಸುಧಾರಿಸಿಕೊಂಡು, ಸ್ವಾವಲಂಬಿಯಾಗಿ ಪರಿವರ್ತನೆಗೊಳ್ಳುವಂತೆ, ಪಡೆದ ಸಾಲವನ್ನು ಪಾವತಿ ಮಾಡುವ ಸಾಮರ್ಥ್ಯ ಗಳಿಸಿಕೊಳ್ಳುವಂತೆ ನೋಡಿಕೊಳ್ಳಬೇಕಲ್ಲವೆ? ಈ ಮಾನಗಳನ್ನು ಸಾಧಿಸಲು ಬ್ಯಾಂಕುಗಳಲ್ಲಿ ಯಾವ ಅಧೋರಚನೆಯ ನಿರ್ಮಾಣವಾಗಿದೆ? ಬ್ಯಾಂಕುಗಳಲ್ಲಿ ಇದಕ್ಕೆ ತಕ್ಕ ವ್ಯವಸ್ಥೆಯಾಗಲಿ ತಜ್ಞತೆಯಾಗಲಿ ರೂಪುಗೊಂಡಿದೆಯೆ? ತಕ್ಕ ಸಿಬ್ಬಂದಿಯ ನೇಮಕವಾಗಿದೆಯೆ? ಉಗುರು ಕತ್ತರಿಸುವ ಕತ್ತರಿಯಿಂದ ಶಸ್ತ್ರಕ್ರಿಯೆ ನಡಸುವುದಾಗಲಿ, ಕೊಡಲಿಯಿಂದ ಉಗುರು ಕತ್ತರಿಸಲು ಯತ್ನಿಸುವುದಾಗಲಿ ಹಾಸ್ಯಾಸ್ಪದವಷ್ಟೇ ಅಲ್ಲ, ಮಹಾ ಅಪಾಯಕರ. ಬ್ಯಾಂಕುಗಳು ಇತರರ ಹಣದಲ್ಲಿ ವ್ಯವಹರಿಸುವ ಸಂಸ್ಥೆಗಳಾದ್ದರಿಂದ ಅವು ತಮಗೆ ಅನೂಚಾನವಾಗಿ ಬಂದ ವಿಧಿ ಪದ್ಧತಿಗಳ ಚೌಕಟ್ಟಿನೊಳಗೆ ಹೊಸ ಗುರಿಗಳನ್ನು ಸಾಧಿಸುವುದು ಹೇಗೆಂಬುದನ್ನು ಕುರಿತು ಚಿಂತಿಸುವುದು ಅಗತ್ಯವಾಗಿದೆ. ಕೊಟ್ಟ ಸಾಲಕ್ಕೆ ಅಂತಿಮವಾಗಿ ಸಿಬ್ಬಂದಿಯೇ ಹೊಣೆಯಾದ್ದರಿಂದ, ಸಾಲದ ಪ್ರತಿಯೊಂದು ಅರ್ಜಿಯನ್ನೂ ಪ್ರಕ್ರಮೀಕರಿಸಿ, ಸಾಂಸ್ಥಿಕೋದ್ದೇಶಗಳೂ (corporate objectives) ಸಾಮಾಜಿಕೋದ್ದೇಶಗಳೂ (social objectives) ಸಾಧಿಸುವಂತೆ, ಜೊತೆಗೆ ಬ್ಯಾಂಕಿಂಗಿನ ಸಾರಭೂತ ತತ್ವಗಳಾದ ಸುಭದ್ರತೆ (Safety) ದ್ರವತ್ವ (liquidity)ಗಳೂ ಸಾಧಿತವಾಗುವಂತೆ, ಪರಸ್ಪರ ವಿರುದ್ಧವಾದ ಈ ಧ್ಯೇಯೋದ್ದೇಶಗಳ ಸಮನ್ವಯ ಸಾಧಿಸಬೇಕಾಗಿದೆ. ಇದೂ ಒಂದು ಕಲೆ. ಇದನ್ನರಿಯದ ರಾಜಕಾರಣಿಗಳು ಕಂಚಿನ ಅಂಗಡಿಗೆ ನುಗ್ಗಿದ ಆನೆಯಂತೆ ಎಲ್ಲವನ್ನೂ ನಾಶಪಡಿಸತೊಡಗಿದ್ದಾರೆ. ದೇವತೆಗಳು ಹೆಜ್ಜೆಯಿಕ್ಕಲೂ ಅಂಜುವೆಡೆಯಲ್ಲಿ ಮೂರ್ಖರು ಮುನ್ನುಗ್ಗುತ್ತಾರೆ! ಇದರಿಂದಾಗುವ ಅನಾಹುತ ಅಷ್ಟಿಷ್ಟಲ್ಲ! ಚಿನ್ನದ ತತ್ತಿ ಇಡುವ ಕೋಳಿಯ ಹೊಟ್ಟೆಯನ್ನೇ ಬಗೆಯುವುದು ಮಹಾಪರಾಧ!

### ಪ್ರಥಮ ಪಾಠಗಳು

ಬ್ಯಾಂಕುಗಳಂಥ ಸಂಸ್ಥೆಗಳನ್ನು ಸಮಾಜಕಲ್ಯಾಣ ಕಾರ್ಯಗಳಿಗೆ, ಆರ್ಥಿಕ ಪ್ರಗತಿಯ ಉದ್ದೇಶಗಳಿಗೆ ಬಳಸಿಕೊಳ್ಳಬಯಸುವ ರಾಜಕಾರಣಿಗಳು ಈ ಬಗ್ಗೆ ಕೆಲವು ಪ್ರಥಮ ಪಾಠಗಳನ್ನು ಕಲಿಯಬೇಕಾಗಿದೆ. ಅವನ್ನು ಈ ರೀತಿ ಪಟ್ಟಿ ಮಾಡಿ ಹೇಳಬಹುದು:

1 ರಾಷ್ಟ್ರೀಕೃತ ಸಂಸ್ಥೆಗಳು ರಾಷ್ಟ್ರದ ಸ್ವತ್ತುಗಳು, ಸರ್ಕಾರದ ಇಲಾಖೆಗಳಲ್ಲ. ಅವಕ್ಕೂ ವ್ಯಕ್ತಿತ್ವಗಳುಂಟು, ಸ್ವರೂಪಗಳುಂಟು. ಅವುಗಳ ಸ್ವರೂಪ ನಾಶವಾಗದ ಹಾಗೆ ಅವನ್ನು ರಾಷ್ಟ್ರ ಕಲ್ಯಾಣಕ್ಕಾಗಿ ದುಡಿಸಿಕೊಳ್ಳುವುದು ಹೇಗೆಂಬುದನ್ನು ಅರಿಯಬೇಕು. ಅವು ಸರ್ಕಾರಿ ಇಲಾಖೆಗಳಲ್ಲವಾದ್ದರಿಂದ ಇಲಾಖಾ ನಿಯಮಗಳನ್ನು ಅವಕ್ಕೆ ಅನ್ವಯಿಸಿದರೆ ಅವು ಸತ್ತುಹೋಗುತ್ತವೆ.

2 ಹೀಗೆಂದರೆ ಅವು ಸ್ವಚ್ಛಂದವಾಗಿರಬೇಕೆಂದಲ್ಲ. ಸರ್ವಾನುಮತದಿಂದ ರೂಪಿತವಾದ ನೀತಿಸಂಹಿತೆಯೊಂದಕ್ಕೆ ಅನುಗುಣವಾಗಿ ಅವು ಕಾರ್ಯಾಚರಣೆ ನಡೆಸಬೇಕು. ಅವುಗಳ ಮೇಲ್ವಿಚಾರಣೆಯ ಹೊಣೆಯನ್ನು ಸ್ವಾಯತ್ತ ಸಂಸ್ಥೆಗಳಿಗೆ ಬಿಟ್ಟುಕೊಡಬೇಕು. ಉದಾಹರಣೆಗೆ, ಈ ಕೆಲಸ ಮಾಡಲು ನಮ್ಮಲ್ಲಿ ರಿಸರ್ವ್ ಬ್ಯಾಂಕ್ ಇದೆ. ಆದರೆ ರಿಸರ್ವ್ ಬ್ಯಾಂಕಿನಂಥ ಸಂಸ್ಥೆ ಕೂಡ ಇಂದು ಸರ್ಕಾರದ ಇಲಾಖೆಯಂತೆ ಪರಿವರ್ತನೆಗೊಳ್ಳುತ್ತಿದೆ.

3 ಹಣವನ್ನು ಕೊಟ್ಟುಬಿಟ್ಟರೆ ಒಮ್ಮಿಂದೊಮ್ಮೆಲೇ ಪ್ರಗತಿ ಸಾಧಿಸಿಬಿಡುತ್ತದೆ ಎಂಬ ಭ್ರಮೆ ಬಿಡಬೇಕು. ಆ ಹಣವನ್ನು ಹೇಗೆ ಬಳಸಿಕೊಳ್ಳಬೇಕೆಂಬ ಪರಿಜ್ಞಾನವೂ ದೊರಕಬೇಕು. ಅದನ್ನು ದೊರಕಿಸಲು ಯುಕ್ತವಾದ ವ್ಯವಸ್ಥೆ ರೂಪಿತವಾಗಿದೆಯೆ ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕು. ಹಣ ನೀಡಿಕೆಗಿಂತ ಇದಕ್ಕೆ ಆದ್ಯತೆ ನೀಡಬೇಕು. ಅಲ್ಲದೆ ನೀಡಿದ ಹಣ ಸಾಕೇ, ಸಾಲದೇ ಎಂಬ ಬಗೆಗೂ ಪರಿಶೀಲನೆ ನಡಸಬೇಕು.

4 ಸಾಲ ಕೊಡಿಸುವವರೊಬ್ಬರು, ಹೊಣೆ ಇನ್ನೊಬ್ಬರದು ಎಂಬ ಧೋರಣೆ ಹೋಗಬೇಕು. ಸಾರ್ವಜನಿಕವಾಗಿ ಸಾಲ ವಿತರಣೆ ಮಾಡುವ ಪರಿಪಾಟಿಯೇ ಅರೋಗ್ಯಕರವಲ್ಲ. ಪಡೆಯುವವನ ಕೈ ಯಾವಾಗಲೂ ಕೆಳಗೆ; ನೀಡುವವ ಮೇಲೆ—ಅದೂ ವೇದಿಕೆಯ ಮೇಲೆ! ದೈನ್ಯತೆಯ, ಕ್ಲೈಬ್ಯತೆಯ ವಾತಾವರಣ ಹೋಗಬೇಕು. ನೆರವು ಪಡೆಯುವವನಲ್ಲೂ ಆತ್ಮಗೌರವವನ್ನು ಕುದುರಿಸಬೇಕು.

5 ಇಂಥ ಕಾರ್ಯಕ್ರಮ ಪಕ್ಷಾತೀತವಾಗಿರಬೇಕು. ಎಲ್ಲ ಪಕ್ಷಗಳನ್ನೂ ತೊಡಗಿಸಬೇಕು ಎನ್ನುವುದಕ್ಕಿಂತ ಎಲ್ಲ ಪಕ್ಷಗಳೂ ಇದರಿಂದ ದೂರ ಸರಿಯಬೇಕು. ತಜ್ಞರಿಗೇ ಇದನ್ನು ಬಿಡಬೇಕು.

6 ಇಂದು ಬ್ಯಾಂಕುಗಳಿಗೆ ಮಾಡಲಾಗುತ್ತಿರುವ ನೇಮಕಾತಿಗೂ ಬ್ಯಾಂಕು ಸಿಬ್ಬಂದಿಗಳಿಗೆ ಹೊರಿಸಲಾಗುತ್ತಿರುವ ಹೊಣೆಗಳಿಗೂ ಯಾವುದೇ ಸಂಬಂಧವಿಲ್ಲ. ಹಳೆಯ ಬ್ರಿಟಿಷ್ ಕಾಲದ ಮಾದರಿಯ—ಕೂಡುವ, ಕಳೆಯುವ, ಒಗಟು ಬಿಡಿಸುವ, ಜ್ಞಾಪಕಶಕ್ತಿಯನ್ನಳೆಯುವ, ಉರುಹಚ್ಚುವ ಪ್ರವೃತ್ತಿಯನ್ನು ಬೆಳೆಸುವ, ಒಂದು ರೀತಿಯಲ್ಲಿ ಕೇವಲ ಲಾಟರಿಯ ರೀತಿಯದಾಗಿರುವ—ಪರೀಕ್ಷಾ ಪದ್ಧತಿಯನ್ನು ಬಿಟ್ಟುಕೊಟ್ಟು, ಅಭ್ಯರ್ಥಿಗಳ ಮಾನಸಿಕ ಧೋರಣೆ, ಮೌಲ್ಯಗಳ ಅರಿವು, ಸಾಮಾಜಿಕ ಕಾಳಜಿ, ಬ್ಯಾಂಕಿಂಗ್ ವ್ಯವಹಾರದ ಸ್ವರೂಪದ ಹಾಗೂ ಆರ್ಥಿಕ ಪರಿಸ್ಥಿತಿಯ ಜ್ಞಾನ, ಸಂಘಟನಾ ಚಾತುರ್ಯ, ಸಾರ್ವಜನಿಕರೊಂದಿಗೆ ಮಿಳಿಯುವ ಸಾಮರ್ಥ್ಯ ಮುಂತಾದವನ್ನು ಪರೀಕ್ಷಿಸಿ, ಅದರ ಆಧಾರದ ಮೇಲೆ ಸಿಬ್ಬಂದಿಯನ್ನು ಆಯ್ಕೆ ಮಾಡುವ ವಿಧಾನ ರೂಪಿತವಾಗಬೇಕು. ವಿವಿಧ ಕ್ಷೇತ್ರಗಳಲ್ಲಿ ತಜ್ಞರಾದವರನ್ನು ನೇಮಿಸಬೇಕು. ಸಿಬ್ಬಂದಿ ಸಾಕಷ್ಟಿರಬೇಕು.

7 ಯಾವುದೇ ಅಭಿವೃದ್ಧಿ ಕಾರ್ಯಕ್ರಮ ಯಶಸ್ವಿಯಾಗಬೇಕಾದರೆ ಅಧಿಕಾರದ ವಿಕೇಂದ್ರೀಕರಣವಾಗಬೇಕು. ಪ್ರಥಮತಃ ಬ್ಯಾಂಕುಗಳನ್ನು ಪ್ರಾದೇಶಿಕವಾಗಿ ಒಡೆಯಬೇಕು. ಅನರ್ಥಕಾರಿ ಸ್ಪರ್ಧೆ ಕೊನೆಗೊಳ್ಳಬೇಕು. ಸ್ಥಳೀಯವಾಗಿ ಯೋಜನೆಗಳನ್ನು ರೂಪಿಸಬೇಕು. ಇವನ್ನು ಕಾರ್ಯಗತ ಮಾಡುವ ವಿವಿಧ ಅಭಿಕರಣಗಳ (agencies) ನಡುವೆ ಹೊಂದಾಣಿಕೆ ಇರಬೇಕು. ಈಗ ಇರುವ ವ್ಯವಸ್ಥೆ ಕೇವಲ ತೋರಿಕೆಯದು. ವಾಸ್ತವವಾಗಿ ಈ ಅಭಿಕರಣಗಳ ನಡುವೆ ಯಾವ ಸಹಯೋಗವೂ ಇಲ್ಲ. ಹಲವು ಕುರುಡರು ತಮ್ಮ ಕಾಲುಗಳನ್ನು ಪರಸ್ಪರವಾಗಿ ಕಟ್ಟಿಕೊಂಡು ಓಟದ ಸ್ಪರ್ಧೆಯಲ್ಲಿ ತೊಡಗಿ, ಒಬ್ಬರಿಗೆ ಇನ್ನೊಬ್ಬರು ಕಾಲ್ತೊಡಕಾಗಿದ್ದಾರೆಂದು ಆಪಾದಿಸುತ್ತ, ಪರಸ್ಪರ ಗುದ್ದಾಟದಲ್ಲಿ ನಿರತರಾಗಿದ್ದಂತಿದೆ, ಈಗಿನ ಪರಿಸ್ಥಿತಿ.

8 ಸಾರ್ವಜನಿಕವಾಗಿ ಬ್ಯಾಂಕ್ ಉದ್ಯೋಗಿಗಳನ್ನಾಗಲಿ ಇತರ ರಾಜಕೀಯ ಪಕ್ಷಗಳನ್ನಾಗಲಿ ಅವಹೇಳನ ಮಾಡುವುದು ನಿಲ್ಲಬೇಕು. ಸಾಲ ಮೇಳಗಳು ಯಶಸ್ವಿಯಾಗಲಿಲ್ಲವೆಂದು ಸಂಬಂಧಪಟ್ಟ ಅಧಿಕಾರಿಗಳನ್ನು ವೇದಿಕೆಯ ಮೇಲೆ ಬರಮಾಡಿ, ಅವರಿಗೆಷ್ಟು ಸಂಬಳ ಏನೇನು ಸೌಲಭ್ಯಗಳಿವೆಯೆಂದೂ, ನಿರ್ಗತಿಕರ ಸ್ಥಿತಿ ಎಂಥದೆಂದೂ ಬಣ್ಣಿಸುವ ಮಂತ್ರಿಗಳೇ ಸ್ವತಃ ಏನೇನು ಸೌಲಭ್ಯಗಳನ್ನೂ ಭೋಗಗಳನ್ನೂ ಅನುಭವಿಸುತ್ತಿದ್ದಾರೆಂಬುದನ್ನು ಯೋಚಿಸಬೇಕು. ಎಲ್ಲರ ಸಹಕಾರ ಪಡೆಯುವ ವಿಧಾನ ಇದಲ್ಲ. ಅವಮಾನಿತನಾದವನು ಶಾಶ್ವತ ವಿರೋಧಿಯಾಗುತ್ತಾನೆ. ಅವನ ಮನಸ್ಸು ಮುರಿದು ಹೋದಮೇಲೆ ಯಾವುದರಿಂದಲೂ ಅದು ಬೆಸೆಯದು. ಸಾಲಮೇಳವೊಂದರಲ್ಲಿ ಮಂತ್ರಿಯೊಬ್ಬರು ಸಂಬಂಧಪಟ್ಟ ಅಧಿಕಾರಿಯೊಬ್ಬರನ್ನು ಕರೆದು ಅವರ ಕನ್ನಡ ಅಭಿಮಾನವನ್ನು ಅವಹೇಳನ ಮಾಡಿ, ‘ಕನ್ನಡವನ್ನು ಪ್ರೀತಿಸುವ, ಆದರೆ ಬಡವರಿಗೆ ಸಹಾಯಕರಾಗಿರದ ಇಂಥ ಅಧಿಕಾರಿ ಬೇಕೋ, ಕನ್ನಡಿಗರಲ್ಲದಿದ್ದರೂ ಬಡವರಿಗೆ ನೆರವು ನೀಡುವವರು ಬೇಕೋ’, ಎಂದು ನೆರೆದವರನ್ನು ಕೇಳಿ ಅವರಿಂದ ಧಿಕ್ಕಾರಗಳನ್ನು ಕೂಗಿಸಿದ್ದು ಅನೌಚಿತ್ಯದ ಪರಮಾವಧಿ. ಕನ್ನಡಕ್ಕೂ ಸಾಲಮೇಳಕ್ಕೂ ತೆಕ್ಕೆ ಹಾಕಬಾರದು. ಅಥವಾ ಈ ವಿರೋಧ ಕನ್ನಡಿಗರಿಗೇ ಸೀಮಿತವಾದ್ದೆಂದೂ ಬಗೆಯಬಾರದು. ಬ್ಯಾಂಕ್ ಕನ್ನಡ ಸಂಘಗಳು ಬಡಜನ ವಿರೋಧಿ ಎಂದು ಪ್ರಚಾರ ಮಾಡುವುದೂ, ಅರಿಯದ ಜನರನ್ನು ಕನ್ನಡದ ವಿರುದ್ಧ ಎತ್ತಿಕಟ್ಟುವುದೂ ದೌಷ್ಟ್ಯದ ತುತ್ತತುದಿ. ಇಂಥ ಯತ್ನದಲ್ಲಿ ತೊಡಗಿರುವವರು ಮಾನಸಿಕವಾಗಿ ಅಸ್ವಸ್ಥರಾಗಿರಬೇಕೆಂದು ತೋರುತ್ತದೆ, ತಾವು ಎಂದುಕೊಂಡಂತೆಯೇ ಎಲ್ಲವೂ ಆಗುತ್ತಿಲ್ಲವೆಂದು ಅವರ ಕೋಪ ಎತ್ತೆತ್ತಲೋ ತಿರುಗುತ್ತಿದೆ. ಸಾಮಾನ್ಯ ಜನರನ್ನು ಮೇಲೆತ್ತುವ ಯಾವುದೇ ಕಾರ್ಯವನ್ನಾದರೂ ಆ ಜನರ ಭಾಷೆಯ ಮೂಲಕವೇ—ಕರ್ನಾಟಕದಲ್ಲಿ ಕನ್ನಡದ ಮೂಲಕವೇ—ಸಾಧಿಸಬೇಕು. ಆಗಲೇ ಅದು ಸಾರ್ಥಕವಾದೀತು. ಇದನ್ನು ಎಲ್ಲರೂ ಅರಿಯಬೇಕು.

ಆದ್ದರಿಂದ ಮಂತ್ರಿಗಳಾಗಲಿ ಉನ್ನತ ವ್ಯವಸ್ಥಾಪಕ ವರ್ಗದವರಾಗಲಿ ವೃಥಾ ಗೊಂದಲಗಳನ್ನು ಸೃಷ್ಟಿಸದೆ, ನಿಜಕ್ಕೂ ಆರ್ಥಿಕ ಸಾಮಾಜಿಕ ಪರಿವರ್ತನೆಯನ್ನು ಸಾಧಿಸಲು ಏನು ಮಾಡಬೇಕೆಂಬುದನ್ನು ಕುರಿತು ಯೋಚಿಸಲೂ ಯೋಜಿಸಲೂ ತೊಡಗಬೇಕು. ಅದಕ್ಕಾಗಿ ಕಾರ್ಯಪ್ರವೃತ್ತರಾಗಬೇಕು. ಅವರಲ್ಲಿ ಈಗಲಾದರೂ ಇಂಥ ವಿವೇಕ ಮೂಡಲಿ. ●

# ಮೀನುಗಾರರಿಗೆ ಸಾಮೂಹಿಕ ವಿಮಾ ಯೋಜನೆಯ ಪ್ರೀಮಿಯಂ ವಿನಾಯಿತಿ

## ಕಡಲಾಳದಿಂದ ಮತ್ಸ್ಯಸಂಪತ್ತನ್ನು ಅರಸಿ ತರುವ ಧೀರರಿಗೆ ಕರ್ನಾಟಕ ಸರ್ಕಾರದ ಸಹಾಯಹಸ್ತ

ರಾತ್ರಿ ಹಗಲು ಪ್ರಕೃತಿಯ ಶಕ್ತಿಗಳನ್ನೆದುರಿಸಿ ಸಮುದ್ರದಾಚೆಗೆ ಹೋಗಿ, ತೆರೆಗಳೊಡನೆ ಹೋರಾಡಿ ಜೀವನ ನಡೆಸುವ ಮೀನುಗಾರರ ಬಗ್ಗೆ ಕರ್ನಾಟಕ ಸರ್ಕಾರ ತನ್ನ ಕಾಳಜಿಯನ್ನು ವ್ಯಕ್ತಪಡಿಸುತ್ತಿದೆ. 1983-84ರಿಂದ ಜಾರಿಗೆ ತರಲಾಗಿರುವ ಒಳನಾಡು ಹಾಗೂ ಕರಾವಳಿ ಮೀನುಗಾರರ ಸಾಮೂಹಿಕ ವಿಮಾಯೋಜನೆಯ ಪ್ರೀಮಿಯಂ ಹಣದಿಂದ ಈ ವರ್ಷದಲ್ಲಿ, ಅಂದರೆ 1-5-1986ರಿಂದ 30-4-1987ರ ವರೆಗೆ, ಮೀನುಗಾರರನ್ನು ಸಂಪೂರ್ಣವಾಗಿ ಮುಕ್ತಗೊಳಿಸುತ್ತಿದೆ.

ಈ ವರ್ಷದಲ್ಲಿ 57,768 ಮೀನುಗಾರರ ಪರವಾಗಿ ಕೇಂದ್ರ ಸರ್ಕಾರ ಮತ್ತು ಕರ್ನಾಟಕ ಸರ್ಕಾರದ ಸಹಭಾಗಿತ್ವದಲ್ಲಿ ವಿಮಾ ಕಂಪನಿಗೆ ತಲಾ ರೂ. 9ರಂತೆ ಪ್ರೀಮಿಯಂ ಹಣ ತುಂಬಲಾಗಿದೆ.

ಈ ಸಾಮೂಹಿಕ ವಿಮಾ ಯೋಜನೆಯಲ್ಲಿ ಆಕಸ್ಮಿಕ ಅಪಘಾತಕ್ಕೀಡಾಗಿ ಅಂಗವಿಕಲರಾದ ಮೀನುಗಾರರಿಗೆ ಅಥವಾ ಮೃತರಾದ ಅವಲಂಬಿಗಳಿಗೆ ರೂ. 15,000 ವಿಮಾ ಹಣವನ್ನು ನೀಡಲಾಗುವುದು; ಅಪೂರ್ಣ ಅಂಗವಿಕಲರಾದಲ್ಲಿ ಮೀನುಗಾರರಿಗೆ ರೂ. 7,500 ವಿಮಾ ಹಣ ನೀಡಲಾಗುವುದು. ಈಗ ಮೀನುಗಾರರು ನಿಶ್ಚಿಂತರಾಗಿ ಮೀನು ಹಿಡಿಯಲು ಹೋಗಬಹುದು. ಅಕಸ್ಮಾತ್ ಏನಾದರೂ ಅನಾಹುತವಾದಲ್ಲಿ ಅವರ ಕುಟುಂಬಗಳು ದಾರಿಪಾಲಾಗಬೇಕಾಗಿಲ್ಲ. ಅವರ ಕಷ್ಟಕಾಲದಲ್ಲಿ ಈ ವಿಮಾ ಹಣ ಅವರಿಗೆ ಸಹಾಯ ನೀಡುತ್ತದೆ.

ಒಳನಾಡು ಹಾಗೂ ಕರಾವಳಿ ಮೀನುಗಾರಿಕಾ ಸಹಕಾರಿ ಸಂಘಗಳ ಸದಸ್ಯರಾಗಿರುವ ಎಲ್ಲ ಮೀನುಗಾರರು ಈ ಸಾಮೂಹಿಕ ವಿಮಾಯೋಜನೆಯಡಿಯಲ್ಲಿ ಪ್ರಯೋಜನ ಪಡೆಯುವರು. ಹೆಚ್ಚು ಹೆಚ್ಚು ಮೀನುಗಾರರು ಈ ಸಹಕಾರಿ ಸಂಘಗಳ ಸದಸ್ಯರಾಗಬೇಕೆಂದು ಕೋರಲಾಗಿದೆ. ಸ್ಥಳೀಯ ಮೀನುಗಾರಿಕಾ ಅಧಿಕಾರಿಗಳಿಂದ ಈ ಬಗ್ಗೆ ಹೆಚ್ಚಿನ ವಿವರಗಳನ್ನು ಪಡೆಯಬಹುದು.

**ಬನ್ನಿ, ಮೀನುಗಾರಿಕಾ ಸಹಕಾರಿ ಸಂಘದ ಸದಸ್ಯರಾಗಿ ವಿಮಾ ಯೋಜನೆಯ ಪ್ರಯೋಜನ ಪಡೆಯಿರಿ**

—ಕರ್ನಾಟಕ ವಾರ್ತೆ

# ವಿಶ್ವ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸಹಕಾರ ಮತ್ತು ಸ್ಪರ್ಧೆ

ಎನ್. ಕೆ. ನವರತ್ನ

**1985ರ ಜುಲೈ ತಿಂಗಳಲ್ಲಿ ಇಂಗ್ಲೆಂಡಿನ ಕೇಂಬ್ರಿಜ್‌ನಲ್ಲಿ ಸಮಾವೇಶಗೊಂಡಿದ್ದ 38ನೆಯ ಅಂತರರಾಷ್ಟ್ರೀಯ ಬ್ಯಾಂಕಿಂಗಿನ ಬೇಸಗೆ ಶಿಬಿರದಲ್ಲಿ ಭಾರತದ ಐವರು ಪ್ರತಿನಿಧಿಗಳ ಪೈಕಿ ಒಬ್ಬರಾಗಿ ಈ ಲೇಖಕರು ಪಾಲ್ಗೊಂಡಿದ್ದರು. ಆ ಶಿಬಿರದ ಕಲಾಪದ ಬಗ್ಗೆ ಒಂದು ವರದಿ ಇದು.**

ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನಲ್ಲಿ ಪ್ರಾದೇಶಿಕ ವ್ಯವಸ್ಥಾಪಕನಾಗಿ ಕಾರ್ಯ ನಿರ್ವಹಿಸುತ್ತಿರುವ ನನಗೆ 1985ರ ಜುಲೈನಲ್ಲಿ ಕೇಂಬ್ರಿಜ್‌ನಲ್ಲಿ ಸಮಾವೇಶಗೊಂಡ 38ನೆಯ ಅಂತರರಾಷ್ಟ್ರೀಯ ಬ್ಯಾಂಕಿಂಗ್ "ಸಮ್ಮರ್ ಸ್ಕೂಲ್" ಕಾರ್ಯಕ್ರಮದಲ್ಲಿ ಭಾಗವಹಿಸಬೇಕೆಂದು ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ಬ್ಯಾಂಕರ್ಸ್ ಮೂಲಕ ಆಹ್ವಾನ ಬಂದಿತ್ತು. ಲಂಡನ್ ಇನ್ಸಿಟಿಟ್ಯೂಟ್ ಆಫ್ ಬ್ಯಾಂಕರ್ಸ್‌ನ ಆಶ್ರಯದಲ್ಲಿ ಏರ್ಪಡಿಸಲಾದ ಈ ವಾರ್ಷಿಕ ಕಾರ್ಯಕ್ರಮಕ್ಕೆ ಭಾರತದಿಂದ ಐದು ರಾಷ್ಟ್ರೀಕೃತ ಬ್ಯಾಂಕುಗಳ ಪ್ರತಿನಿಧಿಗಳನ್ನು ಆಯ್ಕೆ ಮಾಡಲಾಗಿತ್ತು. ಆ ಐವರ ಪೈಕಿ ನಾನೂ ಒಬ್ಬನಾಗಿದ್ದೆ.

'ಸಮ್ಮರ್ ಸ್ಕೂಲ್'—ಬೇಸಗೆ ಶಿಬಿರ—ಪ್ರತಿ ವರ್ಷ ಸಮಾವೇಶಗೊಳ್ಳುವ ಅಂತಾರಾಷ್ಟ್ರೀಯ ಬ್ಯಾಂಕುಗಳ ಪ್ರತಿನಿಧಿಗಳ ಸಮಾರಂಭ. ಪ್ರಪಂಚದ ಒಂದೊಂದು ದೇಶದಲ್ಲಿ ಒಂದೊಂದು ವರ್ಷ ಜರುಗುವ ಈ ಕಾರ್ಯಕ್ರಮ-1988ರಲ್ಲಿ, ಪ್ರಪ್ರಥಮವಾಗಿ, ಭಾರತದಲ್ಲಿ ನವದೆಹಲಿಯಲ್ಲಿ ನಡೆಯಲಿದೆ. ಅಭಿವೃದ್ಧಿ ಹೊಂದಿದ/ಹೊಂದುತ್ತಿರುವ ವಿವಿಧ ರಾಷ್ಟ್ರಗಳ ಬ್ಯಾಂಕುಗಳಲ್ಲಿ ವೃತ್ತಿನಿರತರಾದ ಮಧ್ಯಮ ವಯಸ್ಸಿನ ಅಧಿಕಾರಿಗಳು ಈ ಕಾರ್ಯಕ್ರಮಕ್ಕೆ ಆಹ್ವಾನಿಸಲ್ಪಡುವ ಪ್ರತಿನಿಧಿಗಳು. ಭವಿಷ್ಯದ ದಿನಗಳಲ್ಲಿ ತಮ್ಮ ಸಂಸ್ಥೆಗಳ ಆಡಳಿತದ ಹೊಣೆಗಾರಿಕೆ ಹೊರಲು ಸಮರ್ಥರಾದವರನ್ನು ಆರಿಸಲಾಗುತ್ತದೆ. ಅಂತರರಾಷ್ಟ್ರೀಯ ಬ್ಯಾಂಕ್ ಉದ್ಯಮಕ್ಕೆ ಸಂಬಂಧಿಸಿದ ವಿಚಾರಗಳು ಹಾಗೂ ವಿಶ್ವಮಾನವ ಜನಾಂಗದ ಅಭಿವೃದ್ಧಿಯ ಬಗ್ಗೆ ವಿಶಾಲ ದೃಷ್ಟಿಕೋನದಿಂದ ಕೂಡಿದ ವಿಚಾರಗಳನ್ನು ಈ ಸಮಾವೇಶದಲ್ಲಿ ಚರ್ಚಿಸಲಾಗುತ್ತದೆ.

1985ರ ಜುಲೈ 13ರಿಂದ 26ರ ವರೆಗೆ ಸಮಾವೇಶಗೊಂಡಿದ್ದ 38ನೆಯ ಬೇಸಗೆ ಶಿಬಿರದ ಕಾರ್ಯಕ್ರಮದಲ್ಲಿ 60 ರಾಷ್ಟ್ರಗಳ ಒಟ್ಟು 223 ಪ್ರತಿನಿಧಿಗಳು ಭಾಗವಹಿಸಿದ್ದರು. ಇದು ಅಂತಾರಾಷ್ಟ್ರೀಯ ವಿಚಾರಧಾರೆ ಬೆಳೆಸುವ ಒಂದು ಅಧಿವೇಶನ. ಇನ್ಸ್‌ಟಿಟ್ಯೂಟ್ ಆಫ್ ಬ್ಯಾಂಕರ್ಸ್‌ನವರ ಪ್ರಕಾರ ಈ ಶಾಲೆಯ ಮುಖ್ಯ ಉದ್ದೇಶವೆಂದರೆ ಬ್ಯಾಂಕ್ ಉದ್ಯಮವನ್ನು ಕುರಿತ ವಿಶೇಷ ಅಧ್ಯಯನಕ್ಕೆ ಪ್ರೋತ್ಸಾಹ ನೀಡುವುದು ಮತ್ತು ವೃತ್ತಿನಿರತರಲ್ಲಿ ಪರಸ್ಪರ ವೈಯಕ್ತಿಕ ಸಂಬಂಧಗಳನ್ನು ಹೆಚ್ಚಿಸುವುದು. ಈ ಮೂಲ ಉದ್ದೇಶದ ಹಿನ್ನೆಲೆಯುಲ್ಲಿ 38ನೆಯ ಬೇಸಗೆ ಶಿಬಿರದ ವಿಚಾರಸಂಕಿರಣಕ್ಕೆ ಆಯ್ದುಕೊಂಡ ವಿಷಯ "ವಿಶ್ವ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸಹಕಾರ ಮತ್ತು ಸ್ಪರ್ಧೆ".

ಎಸ್. ಕೆ. ನವರತ್ನ : ಪ್ರಾದೇಶಿಕ ವ್ಯವಸ್ಥಾಪಕರು, ಪ್ರಾದೇಶಿಕ ಕಛೇರಿ 3, ಮೈಸೂರು ಬ್ಯಾಂಕು, ಮೈಸೂರು ವಲಯ

**ಚರ್ಚಿತ ವಿಷಯುಗಳು**

ಹದಿನೈದು ದಿನಗಳ ಈ ಸಮಾವೇಶದಲ್ಲಿ ಚರ್ಚಿಸಲಾದ ಪ್ರಮುಖ ವಿಚಾರಗಳು ಹೀಗಿವೆ:

1 ಅಂತರರಾಷ್ಟ್ರೀಯ ಆರ್ಥಿಕ ಹಾಗೂ ವಾಣಿಜ್ಯ ಕ್ಷೇತ್ರಗಳಲ್ಲಿ ಉಂಟಾಗಬಹುದಾದ ಬದಲಾವಣೆ ಮತ್ತು ಅಭಿವೃದ್ಧಿ;
2 ವಾಣಿಜ್ಯ ಕ್ಷೇತ್ರ, ಅಂತಾರಾಷ್ಟ್ರೀಯ ಸಂಘ ಸಂಸ್ಥೆಗಳು ಹಾಗೂ ಸರಕಾರಗಳು;
3 ಅಂತರರಾಷ್ಟ್ರೀಯ ಋಣ ಬಿಕ್ಕಟ್ಟು;
4 ಅಂತರರಾಷ್ಟ್ರೀಯ ಬ್ಯಾಂಕ್ ಉದ್ದಿಮೆಯಲ್ಲಿ ಮೇಲ್ವಿಚಾರಣೆ ಮತ್ತು ಸಹಕಾರ;
5 ವಿಶ್ವ ಆರ್ಥಿಕ ರಂಗದಲ್ಲಿ ಬೆಳವಣಿಗೆ—ಸಾರ್ವಜನಿಕ ಹಿತಾಸಕ್ತಿ, ಖಾಸಗಿ ರಂಗದ ಪ್ರಯತ್ನ;
6 ಅಂತರರಾಷ್ಟ್ರೀಯ ಬ್ಯಾಂಕಿಂಗ್ ಉದ್ಯಮದ ದೇಶಾಂತರ ಅಭಿವೃದ್ಧಿ ಮತ್ತು ಅದು ಎದುರಿಸುತ್ತಿರುವ ಸಮಸ್ಯೆಗಳು;
7 ಬ್ಯಾಂಕಿಂಗ್ ಉದ್ಯಮದ ಸಂಘಟನೆಯ ಸ್ವರೂಪ;
8 ಅಂತರರಾಷ್ಟ್ರೀಯ ಬ್ಯಾಂಕಿಂಗ್ ಉದ್ಯಮದ ದೃಷ್ಟಿಯಿಂದ ಆಸ್ತಿ ಮತ್ತು ಜವಾಬ್ದಾರಿ ತಃಖ್ತೆಯ ವಿಶ್ಲೇಷಣೆ;
9 ಭವಿತವ್ಯಕ್ಕಾಗಿ ಬ್ಯಾಂಕಿಂಗ್ ಉದ್ಯಮದ ಸಂಘಟನೆ.

**ಹೊಮ್ಮಿದ ವಿಚಾರಗಳು**

ಈ ಚರ್ಚೆಗಳಲ್ಲಿ ಹೊಮ್ಮಿದ ವಿಚಾರಗಳು ಹೀಗಿವೆ: ಅಂತರರಾಷ್ಟ್ರೀಯ ಬ್ಯಾಂಕಿಂಗ್ ಉದ್ಯಮ ಇತ್ತೀಚೆಗೆ ವಿಸ್ತೃತಗೊಳ್ಳುತ್ತಿದೆ. ಅವುಗಳ ಜತೆಗೆ ಎದುರಿಸಬೇಕಾದ ಸಮಸ್ಯೆಗಳು ಉಲ್ಬಣಗೊಳ್ಳುತ್ತಿವೆ. ಆರ್ಥಿಕ ಹಾಗೂ ವಾಣಿಜ್ಯ ಕ್ಷೇತ್ರಗಳಲ್ಲಿನ ಏರುಪೇರುಗಳಿಂದ, ರಾಜಕೀಯ ಕಾರಣಗಳಿಂದ, ಆಂತರಿಕ ಕಾರಣಗಳಿಂದ ಈ ಸಮಸ್ಯೆಗಳು ಉಂಟಾಗುತ್ತವೆ.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಆಯಾತ-ನಿರ್ಯಾತಗಳ ಅಸಮತೋಲ, ಅಂತಾರಾಷ್ಟ್ರೀಯ ಋಣಭಾರ, ಮುಂದುವರಿದ ಮತ್ತು ಹಿಂದುಳಿದ ರಾಷ್ಟ್ರಗಳ ನಡುವಣ ಕೊರತೆಯ ವ್ಯಾಪಾರ ಶಿಲ್ಕು, ತತ್ಪರಿಣಾಮವಾಗಿ ಉದ್ಭವಿಸಿರುವ ಋಣಸಮಸ್ಯೆ, ಸಾಲ ಮರುಪಾವತಿ ಮುಂದೂಡುವಿಕೆ ಇವು ವಾಣಿಜ್ಯ ಕ್ಷೇತ್ರಗಳಿಂದ ಉಂಟಾಗುವ ಸಮಸ್ಯೆಗಳೆಂದೂ ಇವುಗಳಿಂದ ಪರೋಕ್ಷವಾಗಿ ಬ್ಯಾಂಕಿಂಗ್ ಉದ್ಯಮಕ್ಕೆ ಅಭದ್ರತೆ ಉಂಟಾಗುತ್ತದೆಂದೂ ಹೇಳಬಹುದು.

ಪ್ರತಿಯೊಂದು ರಾಷ್ಟ್ರವೂ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ರೂಪಿಸಿದ ನೀತಿನಿಯಮ ಕಾನೂನುಗಳಿಂದ ಬ್ಯಾಂಕುಗಳ ಪರಸ್ಪರ ಸ್ಪರ್ಧೆಗೆ ತಡೆ ಉಂಟಾಗುತ್ತದೆ. ಏಕಸ್ವಾಮ್ಯತೆಯಿಂದ ಬ್ಯಾಂಕುಗಳಲ್ಲಿ ಕಾರ್ಯಕ್ಷಮತೆ ಕುಗ್ಗುತ್ತದೆ. ಇವು ರಾಜಕೀಯ ಕಾರಣಗಳ ಸಮಸ್ಯೆಗಳೆಂದು ಹೇಳಬಹುದು. ರಾಜಕೀಯ ಸಮಸ್ಯೆ

ಗಳನ್ನು ರಾಷ್ಟ್ರಮಟ್ಟದಲ್ಲಿ ಪರಸ್ಪರ ಚರ್ಚೆಗಳ ಮುಖಾಂತರ ಪರಿಹರಿಸಬಹುದು.

ಅಲ್ಲದೆ ಆಂತರಿಕ ಸಮಸ್ಯೆಗಳೂ ಬ್ಯಾಂಕ್ ಉದ್ಯಮವನ್ನು ಜರ್ಜರಿತಗೊಳಿಸುತ್ತವೆ. ಅವೆಂದರೆ, ಬದಲಾಗುತ್ತಿರುವ ಸಾಮಾಜಿಕ ಪರಿಸರದಲ್ಲಿ ಬ್ಯಾಂಕ್ ಉದ್ಯೋಗಿಗಳ ದೃಷ್ಟಿ ಕೋನದಲ್ಲಿ ಬದಲಾವಣೆ, ಅಧಿಕಾರ ನಶಿಸುವಿಕೆ, ಗುರಿ ಮೀರಿದ ನಿರೀಕ್ಷೆ—ಇವುಗಳ ಜತೆಗೆ ಯಾಂತ್ರೀಕರಣದ ಜಟಿಲತೆ, ಹೆಚ್ಚುತ್ತಿರುವ ವೆಚ್ಚ, ಲಾಭಾಂಶದಲ್ಲಿ ಗಣನೀಯ ಇಳಿಕೆ, ಇತ್ಯಾದಿ.

### ಸಮಸ್ಯೆಗಳಿಗೆ ಪರಿಹಾರ

ಬ್ಯಾಂಕಿಂಗ್ ಉದ್ಯಮ ಅಭಿವೃದ್ಧಿ ಹೊಂದಬೇಕಾದರೆ ಈ ಎಲ್ಲ ಸಮಸ್ಯೆಗಳಿಂದ ಬಿಡುಗಡೆ ಹೊಂದಬೇಕು. ಕಾರ್ಯವಿಧಾನದಲ್ಲಿ ನವೀಕರಣ, ಅವಶ್ಯ ಯಾಂತ್ರೀಕರಣ, ಶಾಖಾ ವಿಸ್ತರಣ, ಮಾನವ ಸಂಪನ್ಮೂಲ ಅಭಿವೃದ್ಧಿ, ಖರ್ಚು ವೆಚ್ಚಗಳ ಮೇಲೆ ಹಿಡಿತ ಇವನ್ನಾದರೂ ಸಾಧಿಸುವುದು ಅವಶ್ಯಕ. ಜೊತೆಗೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಬ್ಯಾಂಕುಗಳು ಅಭಿವೃದ್ಧಿಶೀಲ ಬ್ಯಾಂಕುಗಳಿಗೆ ಸಾಲ ನೀಡಿ ಆರ್ಥಿಕವಾಗಿ ಬಲಗೊಳ್ಳಲು ಸಹಕರಿಸಬಹುದು.

ಎಲ್ಲಕ್ಕಿಂತ ಹೆಚ್ಚಾಗಿ ಬ್ಯಾಂಕಿಂಗ್ ಉದ್ಯಮದ ವಿಸ್ತರಣೆ ಅಂತರರಾಷ್ಟ್ರೀಯ ಮಟ್ಟದಲ್ಲಿ ತೀವ್ರ ಸಂಕುಚಿತವಾಗುತ್ತಿರುವುದರಿಂದ, ಬದಲಾಗುತ್ತಿರುವ ಪರಿಸರದಲ್ಲಿ ಅಗತ್ಯವಾಗಿ ಬೇಕಾಗಿರುವುದೆಂದರೆ ಆರೋಗ್ಯಕರ ಸ್ಪರ್ಧೆಯು ಜೊತೆಗೆ ಸಹಕಾರ. ಈ ಸ್ಪರ್ಧೆ ಮತ್ತು ಸಹಕಾರ ತತ್ವಗಳು ಒಂದಕ್ಕೊಂದು ಪೂರಕವಾಗಿರುವಂಥವು. ಅಲ್ಲದೆ ಬ್ಯಾಂಕ್ ಉದ್ಯಮದ ಈ ಸಮಸ್ಯೆ ಕೇವಲ ಒಂದು ಬ್ಯಾಂಕ್, ಒಂದು ರಾಜ್ಯ ಅಥವಾ ಒಂದು ರಾಷ್ಟ್ರಕ್ಕಷ್ಟೇ ಸೀಮಿತವಾದ್ದಲ್ಲ. ಈ ಸಮಸ್ಯೆ ವಿಶ್ವವ್ಯಾಪಿಯಾಗಿರುವುದರಿಂದ ಸಹಕಾರ ಒಂದು ಮಹತ್ತರ ತತ್ವವಾಗಿ ರೂಪುಗೊಳ್ಳುತ್ತದೆ. ಈ ಬೇಸಗೆ ಶಿಬಿರದ ಮುಖ್ಯ ಉದ್ದೇಶ ಕೂಡ ಅಂತರರಾಷ್ಟ್ರೀಯ ಬ್ಯಾಂಕುಗಳ ಮಟ್ಟದಲ್ಲಿ ಸಹಕಾರ ತತ್ವವನ್ನು ಪ್ರತಿಪಾದಿಸುವುದೇ ಆಗಿದೆ.

ಈ ಸಮಾವೇಶದ ವಿವಿಧ ಘಟ್ಟಗಳನ್ನು/ಕಾರ್ಯಕ್ರಮಗಳನ್ನು ಗಮನಿಸಿದಾಗ ಪ್ರತಿ ಸಂದರ್ಭದಲ್ಲೂ ಈ ಮೂಲ ಉದ್ದೇಶ ಎದ್ದು ತೋರುತ್ತಿತ್ತು. ಅತ್ಯಂತ ವ್ಯವಸ್ಥಿತವಾಗಿ ಮುಕ್ತವಾತಾವರಣದಲ್ಲಿ ಮುಕ್ತಚರ್ಚೆಗಳು ನಡೆದುವು. ಈ ಉದ್ದೇಶದ ಗುರಿ ಸಾಧಿಸುವತ್ತ ವ್ಯವಸ್ಥಾಪಕರ ದೂರದರ್ಶಿ ಪ್ರಯತ್ನ ಸಾರ್ಥಕ ಎನಿಸಿತ್ತು. ●


*With best compliments from*



***Phone : 2494***

**BE BRIGHT.... BE RIGHT**

**BUY...**

**SHALIMAR PAINTS**

# MURARI BROTHERS

**Bangalore Road : BELLARY-583 101**

*Stockists*

**SHALIMAR PAINTS**

# ಬ್ಯಾಂಕ್ ವಿಲೀನಗಳು

ಟಿ. ಎಸ್. ನಾಗಾನಂದ

ಭಾರತದ ಬ್ಯಾಂಕುಗಳ ರಚನೆಯಲ್ಲಿ ಬ್ಯಾಂಕ್ ವಿಲೀನ-ಸಮಾಮೇಲನಗಳು ಪ್ರಮುಖ ಪಾತ್ರವನ್ನೇ ವಹಿಸಿವೆ. ಬಹುಶಃ ಈ ವಿಲೀನ-ಸಮಾಮೇಲನಗಳು ಆಗದೇಇದ್ದಿದ್ದರೆ ಇಂದು ಭಾರತದಲ್ಲಿ ಬ್ಯಾಂಕಿಂಗ್ ರಚನೆ, ಅದರ ಆಡಳಿತ ವ್ಯವಸ್ಥೆ ಈಗಿನಷ್ಟು ಬಲಿಷ್ಠ ಅಥವಾ ಭದ್ರವಾಗಿರುತ್ತಿರಲಿಲ್ಲವೇನೋ. ಈ ವಿಷಯದಲ್ಲಿ ಕೆಲವು ಸಮಸ್ಯೆಗಳು ಉದ್ಭವಿಸಿರುವುದು ನಿಜ. ಸಮಸ್ಯೆಗಳು ಏನೇ ಇದ್ದರೂ ಇವುಗಳಿಂದ ಹೆಚ್ಚು ಪ್ರಯೋಜನಗಳಿರುವುದರಿಂದಲೇ ಭಾರತದಲ್ಲಿ ಇದುವರೆಗೆ ಬಹಳಷ್ಟು ಬ್ಯಾಂಕ್ ವಿಲೀನ-ಸಮಾಮೇಲನಗಳು ನಡೆದಿವೆ. ಒಂದು ಅಥವಾ ಹೆಚ್ಚು ಅಶಕ್ತ ಬ್ಯಾಂಕುಗಳನ್ನು ಸದೃಢವಾದ ಒಂದು ಬ್ಯಾಂಕಿನೊಂದಿಗೆ ಸೇರಿಸುವುದು ಬ್ಯಾಂಕ್ ವಿಲೀನವಾದರೆ, ಒಂದು ಅಥವಾ ಹೆಚ್ಚು ಬ್ಯಾಂಕುಗಳನ್ನು ಸಂಮಿಲಗೊಳಿಸಿ ಹೊಸತೊಂದು ಬ್ಯಾಂಕನ್ನು ಸ್ಥಾಪಿಸುವುದು ಬ್ಯಾಂಕ್ ಸಮಾಮೇಲನ. ವಿಲೀನಕ್ಕೆ ಒಳಪಡುವ ಬ್ಯಾಂಕನ್ನು ವರ್ಗಾಯಿತ ಬ್ಯಾಂಕೆಂದೂ ವರ್ಗಾಯಿತ ಬ್ಯಾಂಕನ್ನು ತನ್ನೊಳಗೆ ಸೇರಿಸಿಕೊಳ್ಳುವ ಬ್ಯಾಂಕನ್ನು ಹಸ್ತಾಂತರಿ ಬ್ಯಾಂಕೆಂದೂ ಕರೆಯುಬಹುದು. ಉದಾಹರಣೆ: ಜುಲೈ 1985ರಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನೊಂದಿಗೆ ಕೇರಳದ ಬ್ಯಾಂಕ್ ಆಫ್ ಕೊಚ್ಚಿನನ್ನು ವಿಲೀನಗೊಳಿಸಲಾಯಿತು. ಇಲ್ಲಿ ಬ್ಯಾಂಕ್ ಆಫ್ ಕೊಚ್ಚಿನ್ ವರ್ಗಾಯಿತ ಬ್ಯಾಂಕ್; ಭಾರತೀಯ ಸ್ಟೇಟ್ ಬ್ಯಾಂಕ್ ಹಸ್ತಾಂತರಿ ಬ್ಯಾಂಕ್.

## ಕಾರಣಗಳು

ಬ್ಯಾಂಕ್ ವಿಲೀನಕ್ಕೆ ಆಗುವ ಕಾರಣಗಳನ್ನು ಬಾಹ್ಯ ಮತ್ತು ಆಂತರಿಕವೆಂದು ವಿಂಗಡಿಸಬಹುದು. ಮುಗ್ಗಟ್ಟು, ದೇಶ ವಿಭಜನೆ, ಯುದ್ಧ, ಕೈಗಾರಿಕಾ ಕೇಂದ್ರಗಳ ಇಳಿಮುಖ, ಕೃಷಿ ವೈಫಲ್ಯ, ರಾಜಕೀಯ ಮುಂತಾದವು ಬಾಹ್ಯ ಕಾರಣಗಳು. ಬ್ಯಾಂಕ್ ತನ್ನ ವ್ಯಾಪಾರದ ಪರಿಮಾಣವನ್ನು ಹೆಚ್ಚಿಸಿಕೊಳ್ಳಲು, ಉತ್ತಮ ಸೇವೆಯನ್ನು ನೀಡುವ ಸಲುವಾಗಿ ತನ್ನ ಸಾಲ ನೀಡಿಕೆ ಮಿತಿಯನ್ನು ಹೆಚ್ಚಿಸಿಕೊಳ್ಳಲು, ಬ್ಯಾಂಕಿನ ಉತ್ತಮ ಬೆಳವಣಿಗೆ ಸಾಧಿಸಲು, ಅಥವಾ ತನ್ನ ಗಳಿಕೆಯನ್ನು ಅಭಿವೃದ್ಧಿಗೊಳಿಸಿಕೊಳ್ಳಲು ವಿಲೀನಮಾಡಿಕೊಳ್ಳಬಹುದು. ಇವು ಕೆಲವು ಆಂತರಿಕ ಕಾರಣಗಳು.

ಬ್ಯಾಂಕಿನ ಕಾರ್ಯಕ್ಷೇತ್ರದ ವಿಸ್ತರಣೆ ಸಾಧ್ಯವಾಗದೆ ಹೋದರೆ ಅಥವಾ ಶಾಖೆಗಳನ್ನು ತೆರೆಯುವಲ್ಲಿ ಅನುಮತಿ ಪಡೆಯಲು ತೊಡಕುಗಳಿದ್ದಲ್ಲಿ ಈ ಮೇಲೆ ಹೇಳಿರುವ ಆಂತರಿಕ ಕಾರಣಗಳನ್ನು ಸಾಧಿಸಲು ಬೇರೆ ಬ್ಯಾಂಕುಗಳತ್ತ ತನ್ನ (ಹಸ್ತಾಂತರಿ ಬ್ಯಾಂಕ್) ಕಣ್ಣು ಹಾಯಿಸಿ ವಿಲೀನದ ಜಾಡನ್ನು ಅನುಸರಿಸುತ್ತದೆ. ಅಲ್ಲದೆ ಬ್ಯಾಂಕ್ ದೊಡ್ಡದಿದ್ದಷ್ಟೂ ಸಾರ್ವಜನಿಕರಲ್ಲಿ ವಿಶ್ವಾಸವನ್ನು ಮೂಡಿಸಲು ಸಾಮರ್ಥ್ಯ ಪಡೆಯುತ್ತದೆ. ಇದರಿಂದ ಅದು ಹೆಚ್ಚು ಠೇವಣಿಗಳನ್ನು ಆಕರ್ಷಿಸಬಲ್ಲುದಲ್ಲದೆ, ತನ್ನ ಕಾರ್ಯವನ್ನು ವಿಸ್ತಾರಗೊಳಿಸಿಕೊಂಡರೆ ಹೆಚ್ಚುಹೆಚ್ಚು ಸಂಪನ್ಮೂಲಗಳನ್ನು ಸಂಗ್ರಹಿಸಲು ಸಾಧ್ಯವಾಗುತ್ತದೆ. ಸಂಗ್ರಹಿಸಿದ ಸಂಪನ್ಮೂಲಗಳನ್ನು ಸರಿಯಾಗಿ ಮತ್ತು ಪರಿಣಾಮಕಾರಿಯಾಗಿ ಬಳಸುವುದರಿಂದ ತನ್ನ ಲಾಭಪ್ರದತೆಯನ್ನು ಹೆಚ್ಚಿಸಿಕೊಳ್ಳುತ್ತದೆ. ಇದಲ್ಲದೆ ತಾನು ಮಾಡಿದ ವೆಚ್ಚಕ್ಕೆ ಹೆಚ್ಚು ಪ್ರತಿಫಲ ಪಡೆಯುವ ಸಾಧ್ಯತೆಯಿದೆ. ತನ್ನ ಕೇಂದ್ರ/ಪ್ರಧಾನ ಕಛೇರಿಯ ನಿರ್ವಹಣೆ ಮತ್ತು ನಿತ್ಯ ಖರ್ಚಿನ ಭಾರವನ್ನು ತನ್ನ ಎಲ್ಲ ಶಾಖೆಗಳಿಗೂ ಹೊರಿಸಬಹುದು. ಕಾರ್ಯನಿರ್ವಹಣೆ ಹೆಚ್ಚಾದಷ್ಟೂ ಯಾಂತ್ರೀಕರಣಕ್ಕೆ ಹೆಚ್ಚಿನ ಪುಷ್ಟಿ ಸಿಗುತ್ತದೆ. ಈ ಕಾರಣಗಳಿಂದಾಗಿ ಮಾಡಲಾದ ಬ್ಯಾಂಕ್ ವಿಲೀನಗಳನ್ನು ಹೆಚ್ಚಾಗಿ ಅಮೆರಿಕ ಮತ್ತು ಇಂಗ್ಲೆಂಡ್ ದೇಶಗಳಲ್ಲಿ ಕಾಣಬಹುದು.

ಸಾಮಾನ್ಯವಾಗಿ ವರ್ಗಾಯಿತ ಬ್ಯಾಂಕು ಹಸ್ತಾಂತರಿ ಬ್ಯಾಂಕಿಗಿಂತ ಗಾತ್ರದಲ್ಲಿ ಚಿಕ್ಕದಾಗಿರುವುದು ಸಹಜ. ವಿರಳ ಸಂಪನ್ಮೂಲ ಹೊಂದಿರುವ ಸಣ್ಣ ಬ್ಯಾಂಕುಗಳು ಆರ್ಥಿಕ ವಿಪತ್ತಿನ ನೆರಳಿನಲ್ಲಿ ಇರುತ್ತವೆಯಷ್ಟೇ ಅಲ್ಲದೆ ತಮ್ಮ ಹಿತಕ್ಕೆ ವಿರುದ್ಧವಾದ ವದಂತಿಗಳಿಗೆ ಅವು ಬಲು ಸುಲಭವಾಗಿ ಬಲಿಯಾಗಬಹುದಾಗಿದೆ. ಈ ಸಮಯದಲ್ಲಿ ಅವು ಠೇವಣಿದಾರರ ಹಿತಕ್ಕೋಸ್ಕರ ತಮ್ಮ ದಿವಾಳಿತನವನ್ನು ತಪ್ಪಿಸಿಕೊಳ್ಳಲು ಬೇರೆ ಬ್ಯಾಂಕಿನೊಂದಿಗೆ ವಿಲೀನಗೊಳ್ಳಲು ಕಾತರವಾಗಿರುತ್ತವೆ.

ಇದಲ್ಲದೆ ಕೆಲವು ವಿಚಿತ್ರ ಪ್ರಸಂಗಗಳು ನಡೆದಿರುವುದನ್ನೂ ಅಲ್ಲಗಳೆಯುವಂತಿಲ್ಲ—ಸಣ್ಣ ಬ್ಯಾಂಕುಗಳು ಪಟ್ಟಣಗಳಲ್ಲಿರುವ ಬ್ಯಾಂಕುಗಳ ದೊಡ್ಡ ಕಟ್ಟಡ-ಆವರಣಗಳಿಂದ ಆಕರ್ಷಿತವಾಗಿ ಆ ಬ್ಯಾಂಕುಗಳನ್ನು ತಮ್ಮವಾಗಿಸಿಕೊಳ್ಳಲು ಮಾಡಬಹುದು. ಒಂದು ಸಣ್ಣ ಬ್ಯಾಂಕು ಹೀಗೆ ಯಶಸ್ವಿಯಾಗಿದೆ. ಒಂದು ಬ್ಯಾಂಕಿನ ಕಛೇರಿ ಪಟ್ಟಣದಲ್ಲಿದ್ದರೆ ಅದು ತನ್ನ ಕಾರ್ಯ ಜಾಲವನ್ನು ಇನ್ನಷ್ಟು ವಿಸ್ತರಿಸಿಕೊಳ್ಳುವುದಕ್ಕೆ ಸಹಾಯವಾಗುತ್ತದೆ. ಉದಾಹರಣೆಗೆ ಮಹಾರಾಷ್ಟ್ರದಲ್ಲಿನ ಅನುಸೂಚಿತ (ಷೆಡ್ಯೂಲ್ಡ್) ಬ್ಯಾಂಕ್ ಅಲ್ಲದ ಸ್ಥಳೀಯ ಬ್ಯಾಂಕೊಂದು, ಷೆಡ್ಯೂಲ್ಡ್ ಬ್ಯಾಂಕ್‌ನ ಮುಂಬಯಿಯ ಬಂದರು ಪ್ರದೇಶದ ಕಛೇರಿಯ ಆವರಣಕ್ಕೆ ಆಕರ್ಷಿತವಾಗಿ, ಆ ಬ್ಯಾಂಕನ್ನು ತನ್ನದಾಗಿಸಿಕೊಂಡಿದ್ದನ್ನು ಇಲ್ಲಿ ಹೇಳಬಹುದು.

ದೇಶದಲ್ಲಿನ ಬ್ಯಾಂಕ್ ವಿಲೀನಗಳಿಗೆ ಸರ್ಕಾರದ ಉದಾರ ಧೋರಣೆಯೇ ಮುಖ್ಯ ಕಾರಣವೆನ್ನಬಹುದು. ಮುಂಬಯಿ, ಕಲ್ಕತ್ತ, ಮದ್ರಾಸ್ ಪ್ರೆಸಿಡೆನ್ಸಿ ಬ್ಯಾಂಕುಗಳನ್ನು 1921ರಲ್ಲಿ ಅಂದಿನ ಬ್ರಿಟಿಷ್ ಸರ್ಕಾರ ಒಂಧುಗೂಡಿಸಿ 'ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯ' ಸ್ಥಾಪಿಸಿತು. ಭಾರತದಲ್ಲಿ ವಿಲೀನ ಹಾಗೂ ಸಮಾಮೇಲನಗಳ ಚರಿತ್ರೆ ಆರಂಭವಾಗುವುದು ಇಲ್ಲಿಂದ.

1921ರಲ್ಲಿ ಸ್ಥಾಪಿತವಾದ ಇಂಪೀರಿಯಲ್ ಬ್ಯಾಂಕು ಸಿಮ್ಲಾದ ಅಲಯನ್ಸ್ ಬ್ಯಾಂಕನ್ನು ತೆಗೆದುಕೊಳ್ಳಲು 1923ರಲ್ಲಿ ಅಂದಿನ ಬ್ರಿಟಿಷ್ ಸರ್ಕಾರ ಸೂಚಿಸಿತು. ಅಂದಿನ ದಿನದಲ್ಲಿ ಅಲಯನ್ಸ್ ಬ್ಯಾಂಕ್ ಸಾರ್ವಜನಿಕರಲ್ಲಿ ವಿಶ್ವಾಸವನ್ನು ಉಳಿಸಿಕೊಳ್ಳುವಲ್ಲಿ ವಿಫಲಗೊಂಡಿತ್ತು.

ಭಾರತದಲ್ಲಿ ರಿಸರ್ವ್ ಬ್ಯಾಂಕಿನ ಸ್ಥಾಪನೆಗೆ ಮುಂಚೆ ಕೇಂದ್ರೀಯ ಬ್ಯಾಂಕಿಂಗ್ ವಿಚಾರಣಾ ಸಮಿತಿ (1931) ವಿಲೀನದ ಹಾದಿಯಲ್ಲಿದ್ದ ಎಲ್ಲ ತೊಡಕುಗಳನ್ನು ತೊಡೆದು ಹಾಕಲು ಅಂದಿನ ಸರ್ಕಾರಕ್ಕೆ ಪ್ರಬಲವಾಗಿ ಸೂಚಿಸಿತು ಮತ್ತು ವಿಲೀನಗಳಿಗೆ ಸ್ಟಾಂಪ್ ಶುಲ್ಕ

ಟಿ. ಎಸ್. ನಾಗಾನಂದ: ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು 560 001

ಮತ್ತು/ಅಥವಾ ತೆರಿಗೆಯಿಂದ ವಿನಾಯಿತಿ ನೀಡಿ ಪ್ರೋತ್ಸಾಹಿಸ ಬೇಕೆಂದು ಪ್ರತಿಪಾದಿಸಿತು.

ರಿಸರ್ವ್ ಬ್ಯಾಂಕ್ ಸ್ಥಾಪನೆಯ ಅನಂತರ ಇನ್ನೂ ಹೆಚ್ಚಿನ ಪ್ರೇರಣೆ ಈ ದಿಸೆಯಲ್ಲಿ ಮೂಡಿಬಂತು. ಟ್ರಾವಂಕೂರ್ ನ್ಯಾಷನಲ್ ಬ್ಯಾಂಕ್ ಮತ್ತು ಕ್ವಿಲಾನ್ ಬ್ಯಾಂಕುಗಳನ್ನು 1936ರಲ್ಲಿ ಕೂಡಿಸಿದ್ದು ರಿಸರ್ವ್ ಬ್ಯಾಂಕಿನ ಪ್ರಥಮ ಪ್ರಯತ್ನವಾಯಿತು. ಅನಂತರ ಬಂದ ಹೊಸ ಬ್ಯಾಂಕು ರಿಸರ್ವ್ ಬ್ಯಾಂಕಿನಿಂದ ಹೇರಳ ಧನ ಸಹಾಯದ ಬೆಂಬಲ ದೊರಕಿದರೂ ಉಳಿಯಲಾರದೆ ಹೋಯಿತು. ಇದು ಸ್ವಾತಂತ್ರ್ಯಪೂರ್ವದ ಬ್ಯಾಂಕ್ ವಿಲೀನ–ಸಮಾಮೇಲನ ಚರಿತ್ರೆ. ಸ್ವಾತಂತ್ರ್ಯಾನಂತರದ ಚಿತ್ರಣವನ್ನು ಈ ಮುಂದೆ ಹೇಳಲಾಗಿದೆ.

1949ರ ಬ್ಯಾಂಕಿಂಗ್ ವಿನಿಯಮನ ಅಧಿನಿಯಮದ 1949ರ 36ನೆಯ ಪ್ರಕರಣದ ರೀತ್ಯ, ಬ್ಯಾಂಕುಗಳ ಕೋರಿಕೆಯ ಮೇರೆಗೆ ಅವುಗಳ ಸಮಾಮೇಲನಕ್ಕೆ ನೆರವಾಗಲು ಅಥವಾ ಮಧ್ಯಸ್ಥಿಕೆ ವಹಿಸಲು ರಿಸರ್ವ್ ಬ್ಯಾಂಕ್ ಅಧಿಕಾರ ಪಡೆಯಿತು. 2ನೆಯ ಮಹಾ ಯುದ್ಧದ ಅವಧಿಯಲ್ಲಿ ಸಣ್ಣಪುಟ್ಟ ಬ್ಯಾಂಕುಗಳು ನಾಯಿಕೊಡೆ ಗಳಂತೆ ಹುಟ್ಟಿಕೊಂಡಿದ್ದುವು. ಇವು ಅಪ್ರಾಮಾಣಿಕ ವ್ಯಕ್ತಿಗಳಿಂದ ನಿರ್ವಹಿಸಲ್ಪಡುತ್ತಿದ್ದುವು. ಇದು ರಿಸರ್ವ್ ಬ್ಯಾಂಕನ್ನು ಆತಂಕ ಕ್ಕೀಡುಮಾಡಿತು. ಇವನ್ನು ಒಟ್ಟಿಗೆ ಸೇರಿಸಿ ಒಂದು ಅಥವಾ ಎರಡು ಬಲಿಷ್ಠ ಬ್ಯಾಂಕುಗಳನ್ನು ತೆರೆಯುವಲ್ಲಿ ರಿಸರ್ವ್ ಬ್ಯಾಂಕ್ ತನ್ನ ಪ್ರಬಲ ಪ್ರಯತ್ನವನ್ನೇ ನಡೆಸಬೇಕಾಯಿತು. ಇದಲ್ಲದೆ, ಸ್ವಾತಂತ್ರ್ಯ ಸಮಯದಲ್ಲಿ ದೇಶ ವಿಭಜನೆಯಾದಾಗ ವಿಶೇಷವಾಗಿ ಪಂಜಾಬ್ ಮತ್ತು ಬಂಗಾಳದಲ್ಲಿದ್ದ ಬ್ಯಾಂಕುಗಳು ಸಂದಿಗ್ಧತೆಗೆ ಸಿಕ್ಕಿಕೊಂಡುವು. ಈ ಕಾರಣದಿಂದಾಗಿ ಬ್ಯಾಂಕುಗಳನ್ನು ವಿಳಂಬವಿಲ್ಲದೆ ಸಮಾಮೇಲನ ಗೊಳಿಸಲು 1950ರಲ್ಲಿ ಬ್ಯಾಂಕಿಂಗ್ ವಿನಿಯಮನ ಅಧಿನಿಯಮಕ್ಕೆ 44ಎ ಪ್ರಕರಣವನ್ನು ಸೇರಿಸಲಾಯಿತು. ಯಾವುದೇ ಬ್ಯಾಂಕಿಂಗ್ ಕಂಪನಿ ಇನ್ನೊಂದು ಬ್ಯಾಂಕಿಂಗ್ ಕಂಪನಿಯೊಂದಿಗೆ ಸಮಾಮೇಲನಕ್ಕೆ ಸಂಬಂಧಿಸಿದ ಕರಾರು ಕರಡು ಆಯಾ ಬ್ಯಾಂಕಿಂಗ್ ಕಂಪನಿಯ ⅔ರಷ್ಟು ಷೇರುದಾರರಿಂದ ಒಪ್ಪಿಗೆ ಪಡೆಯದೆ ಮತ್ತು ನಿರ್ಣಯ ವನ್ನು ಅಂಗೀಕರಿಸದೆ ಸಮಾಮೇಲನಗೊಳ್ಳುವಂತಿಲ್ಲ ಎಂಬುದಾಗಿ ಈ ಪ್ರಕರಣ ವಿಧಿಸುತ್ತದೆ. ಬಂಗಾಲದ ನಾಲ್ಕು ಬ್ಯಾಂಕುಗಳನ್ನು ಸಮಾಮೇಲನಗೊಳಿಸಿ ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ ಸ್ಥಾಪಿತವಾಗಲು ಈ ಪ್ರಕರಣ ಅನುವು ಮಾಡಿಕೊಟ್ಟಿತು.

ಸಣ್ಣ ಬ್ಯಾಂಕುಗಳನ್ನು ವಿಸರ್ಜನೆಗೆ ಸಂಬಂಧಿಸಿದಂತೆ ಟ್ರಾವಂ ಕೂರ್-ಕೊಚ್ಚಿನ್ ಬ್ಯಾಂಕಿಂಗ್ ವಿಚಾರಣಾ ಸಮಿತಿ ನೀಡಿದ ವರದಿ ಮತ್ತು 1960ರಲ್ಲಿ ಸಂಭವಿಸಿದ ಪಾಲೈ ಸೆಂಟ್ರಲ್ ಬ್ಯಾಂಕ್ ಮತ್ತು ಲಕ್ಷ್ಮಿ ಬ್ಯಾಂಕುಗಳ ದಿವಾಳಿತನ ಇವುಗಳಿಂದ ಭಾರತದಲ್ಲಿ ಬ್ಯಾಂಕಿಂಗ್ ರಚನೆಯನ್ನು ಬಲಿಷ್ಠಗೊಳಿಸುವ ಬಗ್ಗೆ ರಿಸರ್ವ್ ಬ್ಯಾಂಕು ತುರ್ತು ಕ್ರಮ ಕೈಗೊಳ್ಳುವುದು ಅಗತ್ಯವಾಯಿತು. ತತ್ಸಂಬಂಧವಾಗಿ 1960ರಲ್ಲಿ 45ನೆಯ ಪ್ರಕರಣವನ್ನು ಬ್ಯಾಂಕಿಂಗ್ ವಿನಿಯಮನ ಅಧಿನಿಯಮದಲ್ಲಿ ಸೇರಿಸಲಾಯಿತು. ರಿಸರ್ವ್ ಬ್ಯಾಂಕಿನ ಸಲಹೆಯ ಮೇರೆಗೆ ಕೇಂದ್ರ ಸರ್ಕಾರ ದುರ್ಬಲ ಬ್ಯಾಂಕೊಂದನ್ನು ಬಲಿಷ್ಠ ಬ್ಯಾಂಕಿನೊಂದಿಗೆ ಕಡ್ಡಾಯವಾಗಿ ವಿಲೀನಗೊಳಿಸಲು ಕೇಂದ್ರ ಸರ್ಕಾರಕ್ಕೆ ಅಧಿಕಾರ ಕೊಡುತ್ತದೆ.

1985ರಲ್ಲಿ ನಡೆದ ಬ್ಯಾಂಕ್ ವಿಲೀನಗಳು ಇವು :

| ವರ್ಗಾಯಿತ ಬ್ಯಾಂಕುಗಳು | ಹಸ್ತಾಂತರಿ ಬ್ಯಾಂಕುಗಳು |
|---|---|
| ಬ್ಯಾಂಕ್ ಆಫ್ ಕೊಚ್ಚಿನ್ | ಭಾರತೀಯ ಸ್ಟೇಟ್ ಬ್ಯಾಂಕ್ |
| ಲಕ್ಷ್ಮಿ ಕಮರ್ಷಿಯಲ್ ಬ್ಯಾಂಕ್ | ಕೆನರಾ ಬ್ಯಾಂಕ್ |
| ಮೀರಜ್ ಸ್ಟೇಟ್ ಬ್ಯಾಂಕ್ | ಯೂನಿಯನ್ ಬ್ಯಾಂಕ್ ಆಫ್ ಇಂಡಿಯ |

ಈ ವರ್ಗಾಯಿತ ಬ್ಯಾಂಕುಗಳು ತಮಗೆ ಬೇಕಾದ ಕಂಪನಿಗಳಿಗೂ ಕೈಗಾರಿಕೋದ್ಯಮಗಳಿಗೂ ಹೇರಳ ಧನಸಹಾಯ ನೀಡಿ, ವಸೂಲಿಗೆ ಕ್ರಮ ತೆಗೆದುಕೊಳ್ಳದಿದ್ದುದರಿಂದ ಇವು ದಿವಾಳಿತನದ ಹಂತ ತಲುಪುವ ಸಾಧ್ಯತೆ ಇತ್ತು. ಇದನ್ನು ಗಮನಿಸಿದ ರಿಸರ್ವ್ ಬ್ಯಾಂಕು ಈ ಬ್ಯಾಂಕುಗಳನ್ನು ಕಡ್ಡಾಯವಾಗಿ ವಿಲೀನಗೊಳಿಸುವಂತೆ ಕೇಂದ್ರ ಸರ್ಕಾರಕ್ಕೆ ಸಲಹೆ ನೀಡಿತು.

ಮೇಲೆ ಹೇಳಿರುವ ಬ್ಯಾಂಕ್ ವಿಲೀನಗಳಲ್ಲದೆ, ಆಸ್ತಿ ಮತ್ತು ಹೊಣೆಗಳ ವರ್ಗಾವಣೆಯ ಮೂಲಕವೂ ಬ್ಯಾಂಕನ್ನು ವಿಲೀನಗೊಳಿಸ ಬಹುದು. ಈ ವಿಧಾನ ಹಿಂದಿನ ವಿಧಾನಗಳಿಗಿಂತ ಭಿನ್ನವೂ ಸರಳವೂ ಆಗಿದೆ. ಉದಾಹರಣೆಗೆ 1960ರಲ್ಲಿ 118 ಶಾಖೆಗಳಿದ್ದ ಕೆನರಾ ಬ್ಯಾಂಕಿನೊಂದಿಗೆ 84 ಶಾಖೆಗಳಿದ್ದ ಪಾಂಡ್ಯನ್ ಬ್ಯಾಂಕನ್ನು ಆಸ್ತಿ ಮತ್ತು ಹೊಣೆಯ ವರ್ಗಾವಣೆಯ ಮೂಲಕವೇ ವಿಲೀನಗೊಳಿಸ ಲಾಯಿತು.

ವಿಲೀನದ ವಿಧಾನ

ಬ್ಯಾಂಕನ್ನು ವಿಲೀನಗೊಳಿಸುವ ಮುನ್ನ ರಿಸರ್ವ್ ಬ್ಯಾಂಕು ವಿಲೀನದ ಕರಡನ್ನು ಸಿದ್ಧಪಡಿಸುತ್ತದೆ. ಈ ಕರಡು ಪ್ರತಿಗಳನ್ನು ವರ್ಗಾಯಿತ ಬ್ಯಾಂಕ್ ಮತ್ತು ಹಸ್ತಾಂತರಿ ಬ್ಯಾಂಕುಗಳಿಗೆ ನೀಡಲಾಗುತ್ತದೆ. ಈ ಕರಡಿನಲ್ಲಿ, ಹಸ್ತಾಂತರಿ ಬ್ಯಾಂಕು ವಿಲೀನದ ಸಮಯದಲ್ಲಿ ಪಾಲಿಸ ಬೇಕಾದ ಸಂಪೂರ್ಣ ವಿವರಗಳಿರುತ್ತವೆ. ಕೇಂದ್ರಸರ್ಕಾರ ವರ್ಗಾಯಿತ ಬ್ಯಾಂಕಿನ ಕಾರ್ಯವ್ಯವಹಾರಗಳನ್ನು ನಿರ್ಬಂಧಿಸಿದ ದಿನಾಂಕದಂದು ಇದ್ದಂತೆ ತಯಾರಿಸಿದ ಬ್ಯಾಂಕಿನ ಸಿಲ್ಕು ಪಟ್ಟಿ ರಿಸರ್ವ್ ಬ್ಯಾಂಕಿನಿಂದ ಅನುಮೋದಿತ ಅಥವಾ ಸನ್ನದಿತ ಲೆಕ್ಕಿಗರಿಂದ ಪರಿಶೀಲನೆಯಾಗಿ ಅವರಿಂದ ಇದಕ್ಕೆ ಪ್ರಮಾಣಪತ್ರ ಸ್ವೀಕರಿಸಲಾಗುತ್ತದೆ. ಈ ಪಟ್ಟಿ ಯನ್ನು ವರ್ಗಾಯಿತ ಬ್ಯಾಂಕ್ ಮತ್ತು ಹಸ್ತಾಂತರಿ ಬ್ಯಾಂಕುಗಳಿಗೆ ಕೊಡಲಾಗುವುದು. ಅನಂತರ ವರ್ಗಾಯಿತ ಬ್ಯಾಂಕಿನ ಪುಸ್ತಕಗಳನ್ನು ಮುಚ್ಚಿ, ಖಾತೆಗಳನ್ನು ಹಸ್ತಾಂತರಿಸಿ ಬ್ಯಾಂಕಿಗೆ ವರ್ಗಾಯಿಸಲಾಗು ತ್ತದೆ.

ವಿಲೀನಕ್ಕೆ ಮುನ್ನ ಇರುವ ಕಾನೂನು ತೊಡಕುಗಳನ್ನು ನಿವಾರಿಸಲು/ನಿಭಾಯಿಸಲು, ಈ ಕರಡನ್ನು ರಿಸರ್ವ್ ಬ್ಯಾಂಕ್ ಸಿದ್ಧ ಪಡಿಸುತ್ತದೆ. ವಿಲೀನಕ್ಕೆ ಮುನ್ನ ಇದ್ದ ವರ್ಗಾಯಿತ ಬ್ಯಾಂಕ್ ನೌಕರರ ಸೇವಾ ನಿಯಮ, ಸೌಲಭ್ಯ, ಭತ್ಯೆ, ಇತ್ಯಾದಿಗಳು ವಿಲೀನದ ಅನಂತರ ಬದಲಾವಣೆಯಾಗುವುದು. ವಿಲೀನದ ಅನಂತರ ಸೇವೆ ಯಲ್ಲಿ ಮುಂದುವರಿಯಲಿಚ್ಛಿಸದ ವರ್ಗಾಯಿತ ಬ್ಯಾಂಕ್ ನೌಕರರಿಗೆ ಕೊಡುವ ಆರ್ಥಿಕ ಪರಿಹಾರ ಇತ್ಯಾದಿ ವಿವರಗಳನ್ನು ಈ ಕರಡು ಒಳಗೊಂಡಿರುತ್ತದೆ.

ಒಟ್ಟಿನಲ್ಲಿ ಬ್ಯಾಂಕ್ ವಿಲೀನ ದುರ್ಬಲ ಮತ್ತು ಲಾಭದಾಯಕ ವಲ್ಲದ ಬ್ಯಾಂಕುಗಳನ್ನು ವರ್ಜಿಸಿ, ಅವುಗಳಿಂದ ಠೇವಣಿದಾರರಿಗೆ ಆಗುವ ತೊಂದರೆ/ನಷ್ಟಗಳನ್ನು ತಪ್ಪಿಸಿ, ಬ್ಯಾಂಕಿಂಗ್ ವ್ಯವಸ್ಥೆಯನ್ನು ಬಲಗೊಳಿಸಿ, ದೇಶದಲ್ಲಿ ಬ್ಯಾಂಕ್ ವ್ಯವಹಾರಗಳು ಸುಗಮವಾಗಿ ಮತ್ತು ಸುವ್ಯವಸ್ಥಿತವಾಗಿ ನಡೆಯುವಂತೆ ಮಾಡುವ ಒಂದು ಸಕಾಲಿಕ ಸಾಧನವಾಗಿದೆ. ●

# ಏಕರೂಪದ ಸೇವಾಶುಲ್ಕಗಳು

ರಾ. ಶಂ. ಗುರುಪ್ರಸಾದ್

ಬ್ಯಾಂಕಿಂಗ್ ಕೇವಲ ಲಾಭಗಳಿಕೆಯ ಉದ್ದೇಶವೊಂದೇ ಅಲ್ಲದೆ ಸಾಮಾಜಿಕ ಅಭಿವೃದ್ಧಿ ಹಾಗೂ ರಾಷ್ಟ್ರಪ್ರಗತಿಯ ಧ್ಯೇಯವನ್ನೂ ಹೊಂದಿ ಸೇವೆ ಸಲ್ಲಿಸುತ್ತಿರುವ ಒಂದು ಉದ್ಯಮವೆಂಬುದು ಈಗ ಎಲ್ಲರಿಗೂ ತಿಳಿದಿರುವ ವಿಚಾರ. ಇದರ ಕಾರ್ಯವ್ಯಾಪ್ತಿ ವಿಸ್ತಾರವಾದ್ದು. ಅದನ್ನು ಮೂರು ಹಂತಗಳಲ್ಲಿ ಹೀಗೆ ವಿಂಗಡಿಸಬಹುದು :

1 ಠೇವಣಿ ಸ್ವೀಕಾರ
2 ಸಾಲ ನೀಡಿಕೆ/ಬಂಡವಾಳ ಹೂಡುವುದು
3 ಇತರ ಸೇವಾಕಾರ್ಯಗಳು

ಬ್ಯಾಂಕಿನ ವೈವಿಧ್ಯಮಯ ಗ್ರಾಹಕವರ್ಗವನ್ನೂ ಮೂರು ಗುಂಪುಗಳಾಗಿ ವಿಂಗಡಿಸಬಹುದು :

1 ಸಾಮಾನ್ಯ ಗ್ರಾಹಕರು
2 ವ್ಯಾಪಾರಿ ವೃಂದ
3 ಕಂಪನಿ ಗ್ರಾಹಕರು

ಈ ತೆರನ ವಿವಿಧ ಗ್ರಾಹಕರುಗಳ ಅನುಕೂಲಕ್ಕೆ ಸರಿಹೊಂದುವಂತೆ ಬ್ಯಾಂಕು ಹಲವಾರು ಸವಲತ್ತುಗಳನ್ನು ನೀಡುತ್ತ ಬಂದಿದೆ. ಒಂದು ಕಡೆಯಿಂದ ಇನ್ನೊಂದು ಕಡೆಗೆ ಹಣ ರವಾನೆ ಮಾಡಲು ಅನುಕೂಲವಾಗುವಂತೆ ಅಂಚೆತಂತಿ ವರ್ಗಾವಣೆ, ಪ್ರವಾಸ ಕಾಲದಲ್ಲಿ ಪ್ರವಾಸಿಗರ ಹಣದ ಸುರಕ್ಷತೆಯ ಸಲುವಾಗಿ ಪ್ರವಾಸಿ ಚೆಕ್ಕುಗಳು, ಆಕರ್ಷಣೀಯವಾದ ಉಡುಗೊರೆ ಚೆಕ್ಕುಗಳು, ಡ್ರಾಫ್ಟ್‌ಗಳು ಮುಂತಾದುವನ್ನು ನೀಡುವುದಲ್ಲದೆ, ತನ್ನ ಗ್ರಾಹಕನ ಚೆಕ್ಕು ಹಾಗೂ ಹುಂಡಿಗಳನ್ನು ಆತನ ಅಭಿಕರ್ತನಾಗಿ ವಸೂಲು ಮಾಡುವಂಥ ಹಲವಾರು ಸೇವಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

ಈ ಬಗೆಯ ಸೇವೆಗಳನ್ನು ಸಲ್ಲಿಸುವಾಗ ಬ್ಯಾಂಕುಗಳು ಸಿಬ್ಬಂದಿ, ಅಂಚೆ, ಮುದ್ರಣ, ಲೇಖನ ಸಾಮಗ್ರಿ ಹಾಗೂ ಇತರ ವೆಚ್ಚಗಳ ಹೊರೆಯನ್ನು ಭರಿಸಬೇಕಾಗುತ್ತದೆ. ಆದ್ದರಿಂದ ಬ್ಯಾಂಕುಗಳು ಈ ದಿಸೆಯಲ್ಲಿ ತಗಲುವ ವೆಚ್ಚದ ಸ್ವಲ್ಪ ಭಾಗವನ್ನು ಗ್ರಾಹಕನಿಗೇ ಇದುವರೆಗೂ ವಿಧಿಸುತ್ತ ಬಂದಿವೆ. ಈ ರೀತಿ ಬ್ಯಾಂಕುಗಳು ತಾವು ನೀಡುವ ಸೇವೆಗಾಗಿ ವಿಧಿಸುವ ಶುಲ್ಕಗಳನ್ನು ಸೇವಾಶುಲ್ಕ ಎಂದು ಕರೆಯಲಾಗಿದೆ. ಇತ್ತೀಚಿನವರೆಗೆ ಬ್ಯಾಂಕುಗಳು ವಿಧಿಸುತ್ತಿದ್ದ ಶುಲ್ಕದ ವಿವರಗಳು 14ನೆಯ ಪುಟದಲ್ಲಿ ಕೊಟ್ಟಿರುವಂತೆ ಇದ್ದುವು :

ಕಳೆದ ಹಲವಾರು ವರ್ಷಗಳಿಂದ ಸಿಬ್ಬಂದಿ, ಮುದ್ರಣ, ಅಂಚೆ, ಲೇಖನ ಸಾಮಗ್ರಿ, ಸೇವೆ ಹಾಗೂ ಇನ್ನಿತರ ವೆಚ್ಚಗಳು ಗಣನೀಯವಾಗಿ ಏರಿದ್ದರೂ ಬ್ಯಾಂಕುಗಳು ಈ ಶುಲ್ಕಗಳ ದರಗಳನ್ನು ಏರಿಸದೆ ತಡೆಹಿಡಿದಿದ್ದುವು. ಈ ಶುಲ್ಕಗಳಿಂದ ಬರುವ ವರಮಾನ ಬ್ಯಾಂಕುಗಳ ಒಟ್ಟು ವರಮಾನಕ್ಕೆ ಸುಮಾರು ಶೇ. 25ರಷ್ಟು ಕಾಣಿಕೆ ಸಲ್ಲಿಸುವುದರಿಂದ, ಲಾಭ ಇಳಿಮುಖವಾಗುತ್ತ ಬಂದಿರುವ ಬ್ಯಾಂಕಿಂಗ್ ವಲಯ ತನ್ನ ವೆಚ್ಚಗಳ ಪ್ರಮಾಣಕ್ಕೆ ಅನುಗುಣವಾಗಿ ಶುಲ್ಕಗಳ ದರವನ್ನು ಯೋಗ್ಯವಾಗಿ ನೆಲೆಗೊಳಿಸುವುದು ಅನಿವಾರ್ಯವಾಯಿತು.

ಅಲ್ಲದೆ, ತನ್ನ ಪ್ರಮುಖ ಗ್ರಾಹಕರನ್ನು ತಮ್ಮ ಕೈಹಿಡಿತದಲ್ಲಿಟ್ಟುಕೊಳ್ಳುವ ಸಲುವಾಗಿಯೋ ಅವರ ವಿಶ್ವಾಸ ಗಳಿಕೆಯ ಉದ್ದೇಶದಿಂದಲೋ ಎಂಬಂತೆ ಅವರಿಗೆ ಶುಲ್ಕ ವಿನಾಯಿತಿ ನೀಡುವುದು ಬ್ಯಾಂಕುಗಳ ವ್ಯವಹಾರ ಚಾತುರ್ಯಗಳಲ್ಲೊಂದು. ಈ ರೀತಿ ವಿನಾಯಿತಿ ತೋರಿಸುವಿಕೆಯಿಂದ ಬ್ಯಾಂಕರುಗಳ ನಡುವೆ ಸ್ಪರ್ಧೆ ಏರ್ಪಡುವಂತಾಗಿ, ಒಂದು ಅಹಿತಕರ ಪರಿಸ್ಥಿತಿಗೆ ಅನುವು ಮಾಡಿಕೊಟ್ಟಿತ್ತು.

ಮತ್ತೊಂದು ಅಂಶವೆಂದರೆ, ಬ್ಯಾಂಕುಗಳು ಸದ್ಯದ ಪರಿಸ್ಥಿತಿಯಲ್ಲಿ ಕೇವಲ ದೈನಂದಿನ ವ್ಯವಹಾರಗಳಲ್ಲಿ ತೊಡಗಿರುವುದೇ ಅಲ್ಲದೆ ಸಮಾಜದ ಸರ್ವತೋಮುಖ ಅಭಿವೃದ್ಧಿಗೂ ಶ್ರಮಿಸಬೇಕಾಗಿರುವುದರಿಂದ ಈ ದಿಸೆಯಲ್ಲಿ ತಗಲುವ ಹೆಚ್ಚಿನ ವೆಚ್ಚವನ್ನೂ ಭರಿಸಬೇಕಾಗಿದೆ.

ಈ ಮೇಲಿನ ಎಲ್ಲ ಅಂಶಗಳನ್ನೂ ಗಮನಿಸಿಯೇ ಎಲ್ಲ ಬ್ಯಾಂಕುಗಳೂ ರಾಷ್ಟ್ರದ ಪ್ರಮುಖ ಬ್ಯಾಂಕೆನಿಸಿರುವ ಭಾರತೀಯ ಸ್ಟೇಟ್ ಬ್ಯಾಂಕು ನಡೆಸಿದ ವಿವಿಧ ಸೇವೆಗಳನ್ನು ಕುರಿತ ವೆಚ್ಚದ ಅಧ್ಯಯನವನ್ನು ಅನುಸರಿಸಿ, ರಿಸರ್ವ್ ಬ್ಯಾಂಕಿನ ಅನುಮತಿಯ ಮೇರೆಗೆ, 1985ರ ಜೂನ್ 1ರಿಂದ ಏಕರೂಪಿ ಶುಲ್ಕ ದರಗಳ ಪರಿಷ್ಕರಣೆ ಮಾಡುವ ನಿರ್ಧಾರ ಕೈಗೊಂಡುವು. ಈ ರೀತಿ ಪರಿಷ್ಕರಣೆ ಮಾಡುವಾಗ ಈ ಮುಂದಿನ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು:

1 ದರಗಳ ಪ್ರಯೋಗ ಸರಳವಾಗಿರಬೇಕು
2 ದರಗಳು ಕೆಲವಾರು ವರ್ಷಗಳ ವರೆಗೆ ಚಾಲ್ತಿಯಲ್ಲಿರುವಂತೆ ನಿಗದಿಪಡಿಸಬೇಕು.
3 ಅಂಚೆ ವೆಚ್ಚ ಮತ್ತಿತರ ವೆಚ್ಚಗಳನ್ನು, ಅವು ಅನ್ವಯಿಸುವೆಡೆ, ವಸೂಲಿ ಮಾಡತಕ್ಕದ್ದು.
4 ಸಾಮಾನ್ಯ ಗ್ರಾಹಕರ ಹಕ್ಕುಗಳು ದಂಡನೆಗೊಳಗಾಗಬಾರದು
5 ಮುಂದೆ ಇತರ ವೆಚ್ಚಗಳಲ್ಲಿ ಹೆಚ್ಚಳವಾದರೆ ದರಗಳು ಆ ವೆಚ್ಚಗಳಿಗೆ ಸರಿದೂಗುವಂತಿರಬೇಕು.

ಭಾರತೀಯ ಸ್ಟೇಟ್ ಬ್ಯಾಂಕ್ ಈ ವಿಚಾರದಲ್ಲೂ ಮುಂದಾಳುತನ ವಹಿಸಿ, 14ನೆಯ ಪುಟದಲ್ಲಿ ಕೊಟ್ಟಿರುವಂತೆ ದರಗಳನ್ನು ಪರಿಷ್ಕರಿಸಿ, ಏಕರೂಪಿ ಸೇವಾಶುಲ್ಕಗಳ ಪರಿಷ್ಕರಣೆಗೆ ಹಾದಿ ಮಾಡಿತು.

ಈ ರೀತಿಯ ಪರಿಷ್ಕರಣೆಯ ಪರಿಣಾಮಗಳು ಇವು :

1 ಬ್ಯಾಂಕುಗಳು ಸೇವೆಗಳ ಬಹುಪಾಲು ವೆಚ್ಚವನ್ನು ವಸೂಲಿ ಮಾಡುವಲ್ಲಿ ಸಫಲವಾಗುವುವು.
2 ಈ ದರಗಳು ಬ್ಯಾಂಕಿನ ಲಾಭ ಗಳಿಕೆಯಲ್ಲಿ ಪರಿಣಾಮಕಾರಿ ಪಾತ್ರ ವಹಿಸುವುದರಿಂದ ಬ್ಯಾಂಕ್ ಶಾಖೆಗಳು ಈ ಬಗೆಯ ವ್ಯವಹಾರವನ್ನು ಹೆಚ್ಚು ಮಾಡಲು ಉತ್ತೇಜನ ದೊರಕುತ್ತದೆ.

ಈ ದರಗಳು ಎಲ್ಲ ಬ್ಯಾಂಕುಗಳಿಗೂ ಸಂಬದ್ಧವಾಗಿರುವುವಲ್ಲದೆ, ಯಾವುದೇ ರೀತಿಯ ಗ್ರಾಹಕರಿಗೂ ರಿಯಾಯಿತಿ ತೋರಿಸತಕ್ಕದ್ದಲ್ಲ

---

ರಾ. ಶಂ. ಗುರುಪ್ರಸಾದ್ : ಭಾರತೀಯ ಸ್ಟೇಟ್ ಬ್ಯಾಂಕ್, ದೂರವಾಣಿ ನಗರ ಶಾಖೆ, ಬೆಂಗಳೂರು 560 016

## 1985ರ ಜೂನ್ 1ರ ವರೆಗೆ ವಿವಿಧ ಬ್ಯಾಂಕುಗಳು ವಿಧಿಸುತ್ತಿದ್ದ ಶುಲ್ಕಗಳ ವಿವರ

| | ಡ್ರಾಫ್ಟ್, ಅಂಚೆ ವರ್ಗಾವಣೆ, ತಂತಿ ವರ್ಗಾವಣೆ | ವಸೂಲಿಗಾಗಿ ರವಾನಿಸಲಾದ ಚೆಕ್ಕುಗಳು, ಹುಂಡಿಗಳು | |
|---|---|---|---|
| | | ಹುಂಡಿಗಳು | ಚೆಕ್ಕುಗಳು |
| ಭಾರತೀಯ ಸ್ಟೇಟ್ ಬ್ಯಾಂಕು | ರೂ. 10,000ದವರೆಗೆ ಪ್ರತಿ ರೂ. 100ಗೆ 20 ಪೈ. ಕನಿಷ್ಠ ರೂ. 2<br>ರೂ. 10,000ದಿಂದ ರೂ. 1 ಲಕ್ಷದವರೆಗೆ ಪ್ರತಿ ರೂ. 100ಗೆ 10 ಪೈ. ಕನಿಷ್ಠ ರೂ. 20<br>ರೂ. 1 ಲಕ್ಷಕ್ಕೆ ಮೇಲ್ಪಟ್ಟು ಪ್ರತಿ ರೂ. 100ಗೆ 3 ಪೈ. ಕನಿಷ್ಠ ರೂ. 100 ; ಗರಿಷ್ಠ ರೂ. 500 | ರೂ. 10,000ದ ವರೆಗೆ ಪ್ರತಿ ರೂ. 100ಗೆ 30 ಪೈ. ಕನಿಷ್ಠ ರೂ. 5<br>ರೂ. 10,000ದಿಂದ ರೂ. 1 ಲಕ್ಷದ ವರೆಗೆ ಪ್ರತಿ ರೂ. 100ಗೆ 20 ಪೈ. ಕನಿಷ್ಠ ರೂ. 30<br>ರೂ. 1 ಲಕ್ಷಕ್ಕೆ ಮೇಲ್ಪಟ್ಟು ಪ್ರತಿ ರೂ. 100 ಗೆ 10 ಪೈ. ಕನಿಷ್ಠ ರೂ. 200 ; ಗರಿಷ್ಠ ರೂ. 500 | ರೂ. 10,000ದ ವರಗೆ ಪ್ರತಿ ರೂ. 100ಗೆ 20 ಪೈ. ಕನಿಷ್ಠ ರೂ. 2<br>ರೂ. 10,000ದಿಂದ ರೂ. 1 ಲಕ್ಷದ ವರೆಗೆ ಪ್ರತಿ ರೂ. 100ಗೆ 10 ಪೈ. ಕನಿಷ್ಠ ರೂ. 20<br>ರೂ. 1 ಲಕ್ಷಕ್ಕೆ ಮೇಲ್ಪಟ್ಟು ಪ್ರತಿ ರೂ. 100ಗೆ 3 ಪೈ. ಕನಿಷ್ಠ ರೂ. 100 ; ಗರಿಷ್ಠ ರೂ. 500 |
| ಕೆನರಾ ಬ್ಯಾಂಕು | ಪ್ರತಿ ರೂ. 100ಗೆ 20 ಪೈ. ಕನಿಷ್ಠ ರೂ. 1 | ಪ್ರತಿ ರೂ. 100ಗೆ 35 ಪೈ. | ಮತ್ತು ಅಂಚೆ ವೆಚ್ಚ |
| ಸಿಂಡಿಕೇಟ್ ಬ್ಯಾಂಕು | ಗ್ರಾಹಕರಿಗೆ : ಪ್ರತಿ ರೂ. 100 ಗೆ 6 ಪೈ.<br>ಇತರರಿಗೆ : ಪ್ರತಿ ರೂ. 100 ಗೆ 10 ಪೈ. | ಪ್ರತಿ ರೂ. 100ಗೆ 15 ಪೈ. | ಮತ್ತು ಅಂಚೆ ವೆಚ್ಚ |
| ವಿಜಯಾ ಬ್ಯಾಂಕು | ಗ್ರಾಹಕರಿಗೆ: ಪ್ರತಿ ರೂ. 100ಗೆ 5 ಪೈ.<br>ಇತರರಿಗೆ : ಪ್ರತಿ ರೂ. ಗಳಿಗೆ 15 ಪೈ. | ಪ್ರತಿ ರೂ. 100 ಗೆ 15 ಪೈ. ಕನಿಷ್ಠ ರೂ. 1 | ಪ್ರತಿ ರೂ. 100ಗೆ 40 ಪೈ. ಮತ್ತು ಅಂಚೆ ವೆಚ್ಚ |
| ಕಾರ್ಪೊರೇಶನ್ ಬ್ಯಾಂಕು | ಗ್ರಾಹಕರಿಗೆ: ಪ್ರತಿ ರೂ. 100ಗೆ 10 ಪೈ.<br>ಇತರರಿಗೆ: ಪ್ರತಿ ರೂ. 100 ಗೆ 15 ಪೈ. | ಪ್ರತಿ ರೂ. 100 ಗೆ 15 ಪೈ. ಯಂತೆ | ಮತ್ತು ಅಂಚೆ ವೆಚ |

## 1985ರ ಜೂನ್ 1ರಿಂದ ಎಲ್ಲ ಬ್ಯಾಂಕುಗಳೂ ಸಮಾನವಾಗಿ ವಿಧಿಸುತ್ತಿರುವ ಶುಲ್ಕದ ದರಗಳ ಪಟ್ಟಿ

| ಡ್ರಾಫ್ಟ್, ಅಂಚೆ ವರ್ಗಾವಣೆ ತಂತಿ ವರ್ಗಾವಣೆ | ಏರಿಕೆಯ ಮಟ್ಟ | ವಸೂಲಿಗಾಗಿ ರವಾನಿಸಲಾದ ಚೆಕ್ಕುಗಳು, ಹುಂಡಿಗಳು | ಏರಿಕೆಯ ಮಟ್ಟ |
|---|---|---|---|
| ರೂ. 500ರ ವರೆಗೆ ರೂ. 2<br>ರೂ. 500ರಿಂದ ರೂ. 1,000ದ ವರೆಗೆ ರೂ. 5<br>ರೂ. 1,000ದಿಂದ ರೂ. 5,000ದ ವರೆಗೆ ರೂ. 10<br>ರೂ. 5,000ದಿಂದ ರೂ. 10,000ದ ವರೆಗೆ ರೂ. 20<br>ರೂ. 10,000ಕ್ಕೆ ಮೇಲ್ಪಟ್ಟು ಪ್ರತಿ ರೂ. 1,000ಕ್ಕೆ ರೂ. 2 ರಂತೆ<br>ಗರಿಷ್ಠ ಮಿತಿ ರೂ. 1,000 | ಶೇಕಡಾ 100ರಿಂದ 500ರ ವರೆಗೆ | ಹುಂಡಿಗಳು<br>ರೂ. 1,000ದ ವರೆಗೆ ರೂ. 5<br>ರೂ. 1,000ದಿಂದ ರೂ. 5,000ದ ವರೆಗೆ ರೂ. 15<br>ರೂ. 5,000ದಿಂದ ರೂ. 10,000 ದವರೆಗೆ ರೂ. 30<br>ರೂ. 10,000ಕ್ಕೆ ಮೇಲ್ಪಟ್ಟು—ಪ್ರತಿ ರೂ. 1,000ಕ್ಕೆ ರೂ. 4 ರಂತೆ<br>ಗರಿಷ್ಠ ಮಿತಿ ರೂ. 1,000<br><br>ಚೆಕ್ಕುಗಳು<br>ರೂ. 1,000ದ ವರೆಗೆ ರೂ. 3<br>ರೂ. 1,000ದಿಂದ ರೂ. 5,000ದ ವರೆಗೆ ರೂ. 10<br>ರೂ. 5,000ದಿಂದ ರೂ. 10,000ದ ವರೆಗೆ ರೂ. 20<br>ರೂ. 10,000ದಿಂದ ರೂ. 1 ಲಕ್ಷದ ವರೆಗೆ ಪ್ರತಿ ರೂ. 1,000 ಕ್ಕೆ ರೂ. 2.50<br>ರೂ. 1 ಲಕ್ಷಕ್ಕೆ ಮೇಲ್ಪಟ್ಟು ಪ್ರತಿ ರೂ. 1,000 ಕ್ಕೆ ರೂ. 2 ರಂತೆ<br>ಕನಿಷ್ಠ ಮಿತಿ ರೂ. 250 ; ಗರಿಷ್ಠ ಮಿತಿ ರೂ. 1,000 | ಶೇಕಡಾ 100 ರಿಂದ 300ರ ವರೆಗೆ |

ಎಂದು ಭಾರತೀಯ ಬ್ಯಾಂಕರುಗಳ ಸಂಘದ ಇತ್ತೀಚಿನ ಸರ್ವ ಸದಸ್ಯರ ಸಭೆಯಲ್ಲಿ ತೀರ್ಮಾನಿಸಲಾಯಿತು. ಅಲ್ಲದೆ, ಕರೆನ್ಸಿ ಕೋರಿಯಿರುವ ಶಾಖೆಗಳಲ್ಲಿ 1982ರ ರಿಸರ್ವ್ ಬ್ಯಾಂಕಿನ ರವಾನೆ ಸೌಲಭ್ಯಗಳ ವ್ಯವಸ್ಥೆ ಹೊತ್ತಗೆಯ 5 (ಎಫ್) ಪರಿಚ್ಛೇದದ ಅಡಿಯಲ್ಲಿ ರಿಯಾಯಿತಿ ದರಗಳ ಸವಲತ್ತನ್ನು ಪಡೆಯುತ್ತಿದ್ದ ಎಲ್ಲ ಗ್ರಾಹಕರುಗಳಿಗೂ ಈ ದರಗಳು 1986ರ ಮಾರ್ಚ್ 1 ರಿಂದ ಅನ್ವಯಿಸತಕ್ಕದ್ದು ಎಂದು ನಿರ್ಧರಿಸಲಾಗಿದೆ. ಆದರೆ ಈ ದರಗಳು ಬ್ಯಾಂಕಿನ ಸಿಬ್ಬಂದಿ ಗ್ರಾಹಕರಿಗೆ ಅನ್ವಯಿಸುವುದಿಲ್ಲ. ಅವರು ಹಿಂದಿನಂತೆ ಸೇವಾಶುಲ್ಕದ ವಿನಾಯಿತಿ ಸೌಲಭ್ಯವನ್ನು ಪಡೆಯುತ್ತಿದ್ದಾರೆ.

ಈ ಏರಿಕೆಗೆ ಗ್ರಾಹಕರ ಪ್ರತಿಕ್ರಿಯೆ ಏನು ಎಂಬುದನ್ನು ಗಮನಿಸಬಹುದು. ವಾಣಿಜ್ಯೋದ್ಯಮ ಫೆಡರೇಷನ್ ಅಧ್ಯಕ್ಷರು ಹಾಗು ಅದರ ಬ್ಯಾಂಕಿಂಗ್ ವ್ಯವಹಾರಗಳನ್ನು ಕುರಿತ ಸಮಿತಿಯ ಅಧ್ಯಕ್ಷರು ಬ್ಯಾಂಕುಗಳು ಸೇವಾಶುಲ್ಕಗಳನ್ನು ಅಸಮರ್ಪಕವಾಗಿ ಏರಿಸಿದಕ್ಕಾಗಿ ತೀವ್ರವಾಗಿ ಆಕ್ಷೇಪಿಸಿದ್ದಾರೆ. ಅಲ್ಲದೆ ಇನ್ನೂ ಹಲವಾರು ಸಂಘಸಂಸ್ಥೆಗಳವರೂ ಸಾರ್ವಜನಿಕರೂ ಈ ತೀವ್ರ ಏರಿಕೆಯನ್ನು ಪ್ರತಿಭಟಿಸಿದ್ದಾರೆ. ಇನ್ನು ಗ್ರಾಹಕ ಸಂಪರ್ಕ ಸಭೆಗಳಂತೂ ಈ ವಿಷಯದ ಮೇಲಿನ ಬಿಸಿ ಚರ್ಚೆಗೆ ಅವಕಾಶ ಮಾಡಿಕೊಟ್ಟವೆ.

ಇನ್ನು ಈ ವಿವಾದದ ಇನ್ನೊಂದು ಮುಖವನ್ನು ನೋಡುವುದಾದರೆ, ಭಾರತೀಯ ಬ್ಯಾಂಕರುಗಳ ಸಂಘದ ಅಧ್ಯಕ್ಷ ಎಂ. ಎನ್. ಗೋಯಿಪೋರಿಯಾ ಅವರು ದರಗಳ ಏರಿಕೆಯನ್ನು ಸಮರ್ಥಿಸಿಕೊಂಡಿದ್ದಾರಲ್ಲದೆ, "ಇನ್ನು ಮುಂದೆಯೂ ಸೇವಾಶುಲ್ಕಗಳನ್ನು ಆಗಿಂದಾಗ್ಗೆ ಪುನರ್ವಿಮರ್ಶಿಸಲಾಗುವುದು" ಎಂದು ಹೇಳಿದ್ದಾರೆ. ಅದರ ಉಪಾಧ್ಯಕ್ಷರಾದ ರತ್ನಾಕರ್ ಅವರು "ಚೆಕ್ಕುಗಳ ಹಣಪಾವತಿ ಕ್ಷಿಪ್ರವಾಗಿ ಆಗುತ್ತಿರುವುದರಿಂದ, ಸೇವಾಶುಲ್ಕ ಏರಿಸಿದ್ದರಿಂದುಂಟಾದ ಅನನುಕೂಲವನ್ನು ತೊಡೆದುಹಾಕಿದಂತಾಗಿದೆ" ಎಂದು ಹೇಳಿ ಏರಿಕೆಯ ಕ್ರಮವನ್ನು ಸಮರ್ಥಿಸಿಕೊಂಡಿದ್ದಾರೆ.

ಹೀಗೆ ದರಗಳ ಏರಿಕೆ ತೀರಾ ಕಡಿದು ಎಂಬ ಟೀಕೆಗಳೂ ಅದರ ಸಮರ್ಥನೆಗಳೂ ಸಾರ್ವಜನಿಕ ಮಾಧ್ಯಮಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿದ್ದರೂ ಬ್ಯಾಂಕುಗಳು ತಮ್ಮ ವೆಚ್ಚಗಳಿಗೆ ಸರಿಹೊಂದಿಸುವಂತೆ ಹಾಗೂ ಬ್ಯಾಂಕುಗಳ ನಡುವೆ ವ್ಯರ್ಥ ಸ್ಪರ್ಧೆಯನ್ನು ಹೋಗಲಾಡಿಸುವ ಸಲುವಾಗಿ ದರಗಳ ಏರಿಕೆ ಅನಿವಾರ್ಯ ಎಂಬುದಂತೂ ನಿಸ್ಸಂದೇಹ. ಹಾಗೆಯೇ "ಪ್ರತಿಯೊಬ್ಬ ಗ್ರಾಹಕನೂ ನಮ್ಮ ಆವರಣದೊಳಗಿನ ಮಹತ್ವದ ವ್ಯಕ್ತಿ" ಎಂಬ ಗಾಂಧೀಜಿಯವರ ನುಡಿಯನ್ನು ಎಲ್ಲ ಬ್ಯಾಂಕರುಗಳೂ ಮನನ ಮಾಡಿಕೊಂಡು, ತಮ್ಮ ಸೇವೆಗಳ ಗುಣಮಟ್ಟವನ್ನು ಏರಿಸಿ, ಗ್ರಾಹಕನಿಗೆ ದರಗಳ ಏರಿಕೆಯ ಬಿಸಿ ತಟ್ಟದಂತೆ ಮಾಡುವ ನಿಟ್ಟಿನಲ್ಲಿ ಕಳಕಳಿ ಹೊಂದಿರಬೇಕು ಎಂಬುದಂತೂ ಸತ್ಯ.

●


WITH BEST COMPLIMENTS FROM



**M/s. UNIVERSAL DRESS MANUFACTURING CO.,**

**V/52, CAR STREET : BELLARY-583 101**

*Manufacturers of*

**HALF PANTS, FULL PANTS AND OTHER READYMADE GARMENTS**

*A Name Renowned for QUALITY*

# ಭಿನ್ನಕ ಬಡ್ಡಿ ದರ ಯೋಜನೆ: ಸಾಧನೆ ವೈಫಲ್ಯಗಳು

ಶ್ರೀಧರ್ ರಾಯಸಂ

ಹಿಂದುಳಿದ ಬಡವರಿಗೂ ಸಾಮಾಜಿಕ ನ್ಯಾಯ ದೊರಕುವಂತೆ ಸಮರ್ಪಕವಾದ ರೀತಿಯಲ್ಲಿ ಸಾಲ ವಿತರಣೆಯಾಗಲು ಅಲ್ಪ ಬಡ್ಡಿ ದರ ಯೋಜನೆ ಅಥವಾ ಭಿನ್ನಕಬಡ್ಡಿದರ ಯೋಜನೆಯನ್ನು 1972ರಲ್ಲಿ ಪ್ರಾರಂಭಿಸಲಾಯಿತು. ಸರ್ಕಾರದ ಆದೇಶದಂತೆ ರಾಷ್ಟ್ರೀಕೃತ ಬ್ಯಾಂಕುಗಳು ಕೆಲವೇ ವರ್ಗಗಳಿಗೆ ಸಾಲ ನೀಡುವುದನ್ನು ವಿಸ್ತರಿಸಿ ಆರ್ಥಿಕವಾಗಿ ಹಿಂದುಳಿದ ದುರ್ಬಲ ವರ್ಗದವರಿಗೂ ಸಾಲ ನೀಡಲು ಮುಂದೆ ಬಂದುವು.

ಬ್ಯಾಂಕುಗಳು ಅತಿ ಕಡಿಮೆ ಬಡ್ಡಿ—ಶೇ. 4ರಂತೆ—ವಿಧಿಸಿ ಉತ್ಪಾದನೆ ಅಭಿವೃದ್ಧಿಯಾಗುವಂತೆ ಗಮನ ಹರಿಸಿದುವು. ಇದು ಚಕ್ರಬಡ್ಡಿಯಾಗಿರದೆ ಸರಳ ಬಡ್ಡಿಯಾಗಿದ್ದು, ಬಡವರಿಗೆ ಇದು ಹೊರೆಯಾಗದಂತೆ ನೋಡಿಕೊಂಡುವು. ಈ ಯೋಜನೆಯ ಮೂಲಕ 1976ರ ಡಿಸೆಂಬರ್ ಅಂತ್ಯಕ್ಕೆ 10.10 ಲಕ್ಷ ಜನರಿಗೆ ರೂ. 47.02 ಕೋಟಿ ಸಾಲ ಒದಗಿಸಲಾಯಿತು. ಸರಾಸರಿಯಲ್ಲಿ ಪ್ರತಿಯೊಬ್ಬ ಸಾಲಗಾರನಿಗೆ ರೂ. 467ರಂತೆ ಬ್ಯಾಂಕುಗಳು ಸಾಲ ನೀಡಿದುವು. 1976ರ ಕೊನೆಗೆ ರಾಷ್ಟ್ರೀಕೃತ ಬ್ಯಾಂಕುಗಳು ಒಟ್ಟು ಸಾಲದಲ್ಲಿ ಈ ಯೋಜನೆಯ ಮೂಲಕ ಶೇ 0.42ರಷ್ಟು ಹಣ ವಿತರಣೆ ಮಾಡಿದುವು.

ಈ ಭಿನ್ನಕ ಬಡ್ಡಿ ದರ ಯೋಜನೆಯಿಂದ ಬ್ಯಾಂಕುಗಳು ನವೀನತೆಯನ್ನೇನೂ ಪ್ರದರ್ಶಿಸಲಿಲ್ಲ. ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಪೂರ್ವದಲ್ಲೇ ಬ್ಯಾಂಕುಗಳು ವಿಭಿನ್ನ ಬಡ್ಡಿ ದರಗಳನ್ನು ವಿವಿಧ ಸಾಲಗಾರರಿಗೆ ವಿಧಿಸುತ್ತಿದ್ದುವು. ಆದರೆ ಅವು ಸಾಲಕ್ಕಾಗಿ ನೀಡಿದ ಚರಾಸ್ತಿ ಸ್ಥಿರಾಸ್ತಿಗಳನ್ನು ಸಾಲಗಾರನ ಇನ್ನಿತರ ಆಸ್ತಿಗಳನ್ನು ಅವಲಂಬಿಸುತ್ತಿದ್ದುವು. ಅತಿ ಹೆಚ್ಚು ಆಸ್ತಿ ಹೊಂದಿದ ಸಾಲಗಾರನಿಗೆ ಅಲ್ಪ ಬಡ್ಡಿ ದರ ವಿಧಿಸಿ, ಕಡಿಮೆ ಆಸ್ತಿ ಹೊಂದಿದವನು ಸಾಲ ಅಪೇಕ್ಷಿಸಿದಲ್ಲಿ ಅತಿ ಹೆಚ್ಚು ಬಡ್ಡಿ ವಿಧಿಸುವ ಕಾಲ ಅದಾಗಿತ್ತು. ಇದರಿಂದ ಹೆಚ್ಚು ಹಣ ಪಾವತಿ ಮಾಡುವ ಸಾಮರ್ಥ್ಯವಿದ್ದವನಿಗೆ ಕಡಿಮೆ ಬಡ್ಡಿ ವಿಧಿಸಿ, ಇನ್ನುಳಿದವರಿಗೆ ಹೆಚ್ಚಿನ ಬಡ್ಡಿಯನ್ನು ಬ್ಯಾಂಕುಗಳು ವಿಧಿಸುತ್ತಿದ್ದುವು. ಆದರೆ ಭಿನ್ನಕ ಬಡ್ಡಿ ದರ ಯೋಜನೆಯ ಅಡಿಯಲ್ಲಿ ಅಲ್ಪ ಆಸ್ತಿ ಇದ್ದವರಿಗೂ ಸಾಲ ದೊರಕುವಂತೆ ಸಹಾಯ ಮಾಡಲು ಪ್ರಾರಂಭವಾಯಿತು. ಈ ಚರಿತ್ರಾರ್ಹ ಯೋಜನೆ ಸಾಮಾಜಿಕ ನ್ಯಾಯ ದೊರಕಿಸುವಲ್ಲಿ ಒಂದು ದಿಟ್ಟ ಹೆಜ್ಜೆ.

ಕಡಿಮೆ ಬಡ್ಡಿ ವಿಧಿಸಿ ಬಡವರ ಏಳಿಗೆಗೆ ಸಹಾಯ ಮಾಡುವ ಈ ಯೋಜನೆ 22ನೆಯ ಜುಲೈ 1970ರಲ್ಲಿ ಹಣಕಾಸು ಮಂತ್ರಿ ಮತ್ತು ರಾಷ್ಟ್ರೀಕೃತ ಬ್ಯಾಂಕುಗಳ ಪ್ರಮುಖ ಕಾರ್ಯನಿರ್ವಾಹಕರ ಸಭೆಯಲ್ಲಿ ಮೂಲ ಸ್ವರೂಪ ತಾಳಿತು. ಆಗಿನ ಹಣಕಾಸು ಮಂತ್ರಿ ಆಗಿದ್ದ ವೈ. ಬಿ. ಚವ್ಹಾಣರ ಸೂಚನೆಯ ಮೇರೆಗೆ ಅತ್ಯಲ್ಪ ಬಡ್ಡಿ ವಿಧಿಸಿ, ಸೂಕ್ಷ್ಮವಾಗಿ ಗುರುತಿಸಿದ ಕಡಿಮೆ ಆದಾಯದ ವರ್ಗಗಳಿಗೆ ಹಣದ ನೆರವು ನೀಡಿ ಉತ್ಪಾದನೆ ಹೆಚ್ಚಾಗುವಂತೆ ಈ ಯೋಜನೆ ಪ್ರಯತ್ನಿಸಿತು. ಆದರೂ ಹೆಚ್ಚಿಗೆ ಬಡ್ಡಿ ನೀಡುವ ಸಾಮರ್ಥ್ಯವುಳ್ಳ ಸಾಲಗಾರರಿಗೆ ಯಾವ ರಿಯಾಯಿತಿಯನ್ನೂ ತೋರಿಸದೆ ಬ್ಯಾಂಕುಗಳು ಸಾಲ ನೀಡಲು ಪ್ರಾರಂಭಿಸಿದುವು. ಈ ಸಲಹೆಗಳ ಮೇರೆಗೆ ಭಾರತೀಯ ರಿಸರ್ವ್ ಬ್ಯಾಂಕ್ ಡಾ॥ ಆರ್. ಕೆ. ಹಜಾರಿ (ಆಗಿನ ಭಾರತೀಯ ರಿಸರ್ವ್ ಬ್ಯಾಂಕಿನ ಉಪಗವರ್ನರ್) ಅವರನ್ನು ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿ, ಯಾವ ಲಾಭದ ಪ್ರತಿಫಲವನ್ನೂ ನಿರೀಕ್ಷಿಸದೆ ಆದಾಯದ ಗುಂಪುಗಳನ್ನು ಗುರುತಿಸಿ ಸಾಲ ನೀಡಲು ಬ್ಯಾಂಕುಗಳಿಗೆ ಆದೇಶ ನೀಡಿತು. ಈ ಸಮಿತಿ ಮೇ 1971ರಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿತು. ಇದು ಏಕಾಭಿಪ್ರಾಯದ ವರದಿಯಾಗಿರಲಿಲ್ಲ. ಅಲ್ಪ ಆದಾಯದ ಗುಂಪುಗಳಿಗೆ, ದುರ್ಬಲ ವರ್ಗದವರಿಗೆ, ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದುಳಿದವರಿಗೆ ಸಾಲದ ಗರಿಷ್ಠ ಪ್ರಮಾಣವನ್ನು ಅವರ ಅಗತ್ಯಕ್ಕೆ ಅನುಸಾರವಾಗಿ ಹೆಚ್ಚಿಸಬೇಕೆಂದು ಸಮಿತಿಯ ಸದಸ್ಯರಾದ ಡಾ॥ ಅಶೋಕ ಮಿತ್ರಾ ತಮ್ಮ ವಾದವನ್ನು ಮುಂದೊಡ್ಡಿದರು. ಬಹು ಸದಸ್ಯರು ಈ ವಾದವನ್ನು ಒಪ್ಪದೆ ಸಾಲ ನೀಡಲು ಆದಾಯ, ಆರ್ಥಿಕ ಪರಿಸ್ಥಿತಿಯನ್ನು ಪರಿಗಣನೆಗೆ ತೆಗೆದುಕೊಳ್ಳದೆ ಸಾಲಗಾರರನ್ನು ಸರ್ವೇಸಾಧಾರಣ ರೀತಿಯಲ್ಲಿ ಗುರುತಿಸಬೇಕೆಂದು ಅಭಿಪ್ರಾಯಪಟ್ಟರು. ಸಮಿತಿಯ ಬಹುತೇಕ ಸದಸ್ಯರು ಶೇ. 8½ಯಿಂದ 10ರ ವರೆಗೆ ಬಡ್ಡಿ ವಿಧಿಸಿ ಸಾಲ ನೀಡಬಹುದೆಂದು ಅಭಿಪ್ರಾಯಪಟ್ಟರು. ಇದರಿಂದ ಸಾಲಗಾರರ ಖಾತೆಗಳಿಗೆ ಉದರಿ ಖಾತರಿ ಸಂಸ್ಥೆ (ಕ್ರೆಡಿಟ್ ಗ್ಯಾರಂಟಿ ಆರ್ಗನೈಸೇಷನ್) ಮತ್ತು ಭಾರತೀಯ ಉದರಿ ಖಾತರಿ ನಿಗಮದಿಂದ (ಕ್ರೆಡಿಟ್ ಗ್ಯಾರಂಟಿ ಕಾರ್ಪೊರೇಷನ್ ಆಫ್ ಇಂಡಿಯ) ರಕ್ಷೆ ದೊರಕುವುದೆಂದು ಭಾವಿಸಿದುವು. ಬಡ್ಡಿ ಹೆಚ್ಚಿಗೆ ವಿಧಿಸದೆ ಸಾಲ ನೀಡಲು ಹಲವಾರು ವರದಿಗಳು ಸೂಚಿಸಿದುವು.

ಸರ್ಕಾರ ಈ ಎಲ್ಲ ವರದಿಗಳನ್ನು ಪರಿಶೀಲಿಸಿ, ಹಲವು ಸದಸ್ಯರ ವಿರೋಧವನ್ನೂ ಲೆಕ್ಕಿಸದೆ, ಶೇ. 4ರಂತೆ ಬಡ್ಡಿ ವಿಧಿಸಿ ಅಲ್ಪ ಆದಾಯವಿರುವ ವರ್ಗಗಳಿಗೆ ಸರಿಯಾದ ರೀತಿಯಲ್ಲಿ ಗುರುತಿಸಿ ಸಾಲದ ನೆರವು ನೀಡಬೇಕೆಂದು ಬ್ಯಾಂಕುಗಳಿಗೆ ಆದೇಶ ನೀಡಿತು.

### ಸಾಲ ಪಡೆಯಲು ಅರ್ಹತೆಗಳು

1 ಪಟ್ಟಣ ಅಥವಾ ಅರೆಪಟ್ಟಣದಲ್ಲಿ ಒಬ್ಬ ವ್ಯಕ್ತಿಯ ಕೌಟುಂಬಿಕ ಆದಾಯ ರೂ. 2,000 ಮೀರದಂತೆ ಮತ್ತು ಹಳ್ಳಿಯಲ್ಲಿ ಅವನ ಆದಾಯ ರೂ. 1,200 ಮೀರದಂತೆ ಇರಬೇಕು.

2 ಒಂದು ವೇಳೆ ಒಬ್ಬ ವ್ಯಕ್ತಿ ಸಾಲ ಅಪೇಕ್ಷಿಸಿದಲ್ಲಿ ಅವನು ಯಾವ ಹೆಚ್ಚು ಭೂಮಿ ಹೊಂದಿರಬಾರದು. ಭೂಮಿಯಿದ್ದರೆ ನೀರಾವರಿ ಜಮೀನು 1 ಎಕರೆಯನ್ನು ಮೀರಿರಬಾರದು ಮತ್ತು ಖುಷ್ಕಿ ಜಮೀನು 2½ ಎಕರೆಗಿಂತ ಹೆಚ್ಚಿರಬಾರದು.

3 ಸಾಲ ಬಯಸುವ ವ್ಯಕ್ತಿ ದುಡಿಯುವವನಾಗಿರಬೇಕು.

4 3 ವರ್ಷಗಳಲ್ಲಿ ಅವನು ಆರ್ಥಿಕ ಜೀವನ ಸಾಮರ್ಥ್ಯದ ಉತ್ಪಾದನೆಯ ಗುರಿ ಸಾಧಿಸುವಂತಿರಬೇಕು.

5 ಒಬ್ಬನೇ ಎರಡು ಹಣಕಾಸು ಸಂಸ್ಥೆಗಳಿಂದ ಸಾಲವನ್ನು ಪಡೆಯಬಾರದು.

ಶ್ರೀಧರ್ ರಾಯಸಂ : ಮೈಸೂರು ಬ್ಯಾಂಕ್, ಬಳ್ಳಾರಿ

6 ಆ ವ್ಯಕ್ತಿ ಬೇರೆ ವ್ಯಕ್ತಿಗಳನ್ನು ಕೆಲಸಕ್ಕಾಗಿ ನೇಮಿಸಬಾರದು.

ಈ ಎಲ್ಲ ಅರ್ಹತೆಗಳು ಕಂಡುಬಂದರೆ ಈ ಕೆಳಗಿನ ಪಂಗಡಗಳಿಂದ ಆರಿಸಿದ ಜನರಿಗೆ ಸಾಲ ನೀಡಬಹುದೆಂದು ಸರ್ಕಾರ ಸೂಚಿಸಿತು :

1 ಪರಿಶಿಷ್ಟ ಜಾತಿ, ಬುಡಕಟ್ಟು ಜನಾಂಗ, ಆದಿವಾಸಿಗಳು ಮತ್ತು ಇನ್ನಿತರರು ವ್ಯವಸಾಯದಲ್ಲಿ ಮತ್ತು ಉಪಕಸುಬುಗಳಲ್ಲಿ ನಿರತರಾಗಿರುವವರು.

2 ಅರಣ್ಯೋತ್ಪನ್ನಗಳನ್ನು ಮಾರುವವರು ಹಾಗೂ ದನದ ಮೇವುಗಳನ್ನು ರೈತರಿಗೆ, ವ್ಯಾಪಾರಸ್ಥರಿಗೆ ಮಾರುವವರು.

3 ಗೃಹ ಕೈಗಾರಿಕೆ ಗುಡಿ ಕೈಗಾರಿಕೆ ಕರಕುಶಲ ಕೈಗಾರಿಕೆಗಳಲ್ಲಿ ನಿರತರಾಗಿರುವವರು. ಉದಾಹರಣೆಗೆ, ಹೊಲಿದ ಬಟ್ಟೆಗಳನ್ನು ಮಾರುವವರು, ಅಗ್ಗದ ತಿಂಡಿ ಪದಾರ್ಥಗಳನ್ನು ಮಾರುವವರು, ರಸ್ತೆ ಬದಿಯಲ್ಲಿ ಚಹದಂಗಡಿ ಹೊಂದಿರುವವರು, ಸೈಕಲ್ ರಿಕ್ಷಾ ನಡೆಸುವವರು, ಚಪ್ಪಲಿ ಬೂಡ್ಸ್ ರಿಪೇರಿ ಮಾಡುವವರು, ಬುಟ್ಟಿಗಳನ್ನು ಹೆಣೆಯುವವರು.

4 ಸರ್ಕಾರದಿಂದ ಸ್ಕಾಲರ್‌ಶಿಪ್ ದೊರೆಯದ ಉನ್ನತ ವ್ಯಾಸಂಗ ಪಡೆಯಲು ಅಪೇಕ್ಷಿಸುವ ಅಂಗವಿಕಲರು.

5 ಸ್ವಯಂ ಉದ್ಯೋಗ ಮಾಡಲು ಅಪೇಕ್ಷಿಸುವವರು.

6 ಅಬಲಾಶ್ರಮದಲ್ಲಿ ಅಬಲೆಯರ ಸಂಘದಿಂದ ಸಿದ್ಧಪಡಿಸಿದ ಮಾರುವ ವಸ್ತುಗಳನ್ನು ತಯಾರಿಸುವವರು.

7 ಗ್ರಾಮಾಂತರ ಪ್ರದೇಶದಲ್ಲಿ ಹೈನುಗಾರಿಕೆಯನ್ನು ಅಲ್ಪ ಪ್ರಮಾಣದಲ್ಲಿ ಅಭಿವೃದ್ಧಿಪಡಿಸಲು ಬಯಸುವವರು.

ಮೇಲೆ ತಿಳಿಸಿದ ಅರ್ಹತೆಯುಳ್ಳ ವ್ಯಕ್ತಿಗಳಿಗೆ ಸಾಲದ ನೆರವು ನೀಡಲು ಭಿನ್ನಕ ಬಡ್ಡಿ ದರ ಯೋಜನೆ ಸಹಾಯಕವಾಯಿತು. ಸಾಮಾನ್ಯವಾಗಿ ಬ್ಯಾಂಕುಗಳು ಒಬ್ಬ ವ್ಯಕ್ತಿಗೆ ಬಂಡವಾಳ ಸಾಲಕ್ಕಾಗಿ ರೂ. 500ಕ್ಕೆ ಮೀರದಂತೆ ಮತ್ತು ದೀರ್ಘಾವಧಿ ಸಾಲವಾಗಿ ರೂ. 2,500 ಮೀರದೆ ನೀಡುತ್ತದೆ. ಈ ಸಾಲಗಳಿಗೆ ಭಾರತೀಯ ಉದರಿ ಖಾತರಿ ನಿಗಮದಿಂದ ರಕ್ಷೆ ದೊರೆಯುತ್ತದೆ. ಬ್ಯಾಂಕುಗಳು ವರ್ಷಕ್ಕೆ ಶೇ. $\frac{1}{8}$ದಂತೆ ಶುಲ್ಕವನ್ನು ಈ ನಿಗಮಕ್ಕೆ ನೀಡುವುದಲ್ಲದೆ ಇದನ್ನು ಸಾಲಗಾರನಿಂದ ವಸೂಲಿ ಮಾಡುವುದಿಲ್ಲ. ಸಾಲಗಾರನಿಂದ ಯಾವ ಸ್ವಭಾಗವನ್ನೂ (ಮಾರ್ಜಿನ್) ಬ್ಯಾಂಕುಗಳು ಒತ್ತಾಯಿಸುವುದಿಲ್ಲ. ಆದರೆ ಸಾಲಗಾರ ತನ್ನ ವಹಿವಾಟು ಹೆಚ್ಚಿಸಿದಂತೆಲ್ಲ ಬ್ಯಾಂಕುಗಳು ಶೇ. 15ರಿಂದ 20ರ ವರೆಗೆ ಸ್ವಭಾಗ ವಿಧಿಸುತ್ತವೆ. ಈ ಯೋಜನೆ ಮೊದಲು ಕೇಂದ್ರ ಸರ್ಕಾರ ಗುರುತಿಸಿದ 163 ಹಿಂದುಳಿದ ಜಿಲ್ಲೆಗಳಿಗೆ, ಅದರಲ್ಲೂ ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ (ಎಸ್.ಎಫ್.ಡಿ.ಎ.) ಮತ್ತು ಸೀಮಾಂತ ರೈತರು ಹಾಗೂ ಕೃಷಿ ಕಾರ್ಮಿಕರ ಸಂಸ್ಥೆಗಳ (ಎಂ.ಎಫ್.ಎ.ಎಲ್) ರಕ್ಷೆಯಲ್ಲಿದ್ದವರಿಗೆ ಅನ್ವಯಿಸಿತು. ಪ್ರತಿಯೊಂದು ರಾಷ್ಟ್ರೀಕೃತ ಬ್ಯಾಂಕು ತನ್ನ ಒಟ್ಟು ಸಾಲದಲ್ಲಿ ಶೇ. 1ರಷ್ಟನ್ನು ಭಿನ್ನಕ ಬಡ್ಡಿದರ ಯೋಜನೆಗಾಗಿ ಮೀಸಲಿಡಬೇಕಾಯಿತು. 1972ರಲ್ಲಿ ಈ ಯೋಜನೆಗಾಗಿಯೇ ರೂ. 20 ಕೋಟಿ ಸಾಲ ವಿನಿಯೋಗವಾಗಿತ್ತು.

ಸಾರ್ವಜನಿಕರಲ್ಲಿ ಈ ಯೋಜನೆಯಿಂದ ಹೊಸ ಉತ್ಸಾಹ ಮೂಡಿತು. ಈ ಯೋಜನೆಯನ್ನು ಕುರಿತು ಚರ್ಚೆ ಭಾಷಣಗಳು ಜರುಗಿದುವು. ಶೇ. 4ರಂತೆ ಬಡ್ಡಿ ನೀಡುವುದರ ಔಚಿತ್ಯವನ್ನು ಅನೇಕರು ಪ್ರಶ್ನಿಸಿದರು. ಪತ್ರಿಕೆಗಳಲ್ಲಿ ಪ್ರತಿವಾದಗಳು ಹೊಮ್ಮಿದುವು. ಇದರ ಕಾರ್ಯವಿಧಾನವನ್ನು ಸರ್ಕಾರ ಅವಲೋಕಿಸಿತು. 1973–74ರ ಆಯವ್ಯಯ ಮಂಡನೆಯ ಸಂದರ್ಭದಲ್ಲಿ ಆಗಿನ ಹಣಕಾಸು ಮಂತ್ರಿ ಹಲವು ರಿಯಾಯಿತಿಗಳನ್ನು ಪ್ರಕಟಿಸಿದರು. ಭಾರತೀಯ ರಿಸರ್ವ್ ಬ್ಯಾಂಕ್ ಹಲವು ಬದಲಾವಣೆಗಳನ್ನು ಮಾಡಿತು:

1 ಈ ಯೋಜನೆಯನ್ನು ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ (ಎಸ್.ಎಫ್.ಡಿ.ಎ) ಸೀಮಾಂತ ರೈತರು ಮತ್ತು ಕೃಷಿ ಕಾರ್ಮಿಕ ಸಂಸ್ಥೆಯ (ಎಂ.ಎಫ್.ಎ.ಎಲ್) ಜಿಲ್ಲೆಗಳಿಗೂ ಅನುಷ್ಠಾನಗೊಳಿಸಬಹುದೆಂದು ಸೂಚಿಸಿತು.

2 ಸಾಲಕ್ಕೆ ಅರ್ಹವಾಗುವ ಹಳ್ಳಿಯ ವ್ಯಕ್ತಿಯ ಗರಿಷ್ಠ ವಾರ್ಷಿಕ ವರಮಾನವನ್ನು ರೂ. 1,200ರಿಂದ ರೂ. 2,000ಕ್ಕೆ ಹಾಗೂ ಪಟ್ಟಣ ಮತ್ತು ಅರೆಪಟ್ಟಣದ ವ್ಯಕ್ತಿಯ ವರಮಾನವನ್ನು ರೂ. 2,000ದಿಂದ ರೂ. 3,000ಕ್ಕೆ ಹೆಚ್ಚಿಸಲಾಯಿತು.

3 ಸಹಬಂಡವಾಳಕ್ಕಾಗಿ ಸಾಲವನ್ನು ರೂ. 500ರಿಂದ ರೂ. 1,500ಕ್ಕೆ, ದೀರ್ಘಾವಧಿ ಸಾಲವನ್ನು ರೂ. 2,500ರಿಂದ ರೂ. 5,000ಕ್ಕೆ ಹೆಚ್ಚಿಸಬಹುದೆಂದು ನಿಯಮವನ್ನು ಸಡಿಲಗೊಳಿಸಲಾಯಿತು.

ಈ ನೀತಿಯಿಂದ ಭಿನ್ನಕ ಬಡ್ಡಿ ದರ ಯೋಜನೆ ಅತಿ ಹೆಚ್ಚು ಪರಿಣಾಮ ಬೀರುವುದೆಂದು ಸರ್ಕಾರ ನಿರೀಕ್ಷಿಸಿತು. 1976ರಲ್ಲಿ ತುರ್ತು ಪರಿಸ್ಥಿತಿಯ ನೆರಳಿನಲ್ಲಿ ಹೆಚ್ಚು ಹೆಚ್ಚು ಸಾಲಗಳನ್ನು ಬ್ಯಾಂಕುಗಳು ನೀಡಿದುವು. ಭಿನ್ನಕ ಬಡ್ಡಿ ದರ ಯೋಜನೆಯ ಪ್ರಗತಿ ಹೆಚ್ಚಿದಂತೆಲ್ಲ ದುರ್ಬಲ ವರ್ಗದವರು ಮತ್ತು ಗ್ರಾಮೀಣ ಜನತೆ ತುಂಬಾ ಲಾಭ ಪಡೆದಿರುವುದನ್ನು ಅರಿತು ಸರ್ಕಾರ ಪುನಃ 1977ರಲ್ಲಿ ನಿಯಮಗಳನ್ನು ಬದಲಾಯಿಸಿ ಒಟ್ಟು ಸಾಲದಲ್ಲಿ 2$\frac{2}{3}$ರಷ್ಟನ್ನು ಹಳ್ಳಿಗಳಿಗೆ ಮತ್ತು ಅರೆಪಟ್ಟಣಗಳಿಗೆ ಮತ್ತು $\frac{1}{3}$ರಷ್ಟು ಸಾಲವನ್ನು ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಜನಾಂಗಕ್ಕೆ ಮೀಸಲಿರಿಸಬೇಕೆಂದು ಆದೇಶ ನೀಡಿತು. 1979ರಲ್ಲಿ ಸರ್ಕಾರ ಮತ್ತೊಂದು ಆದೇಶದ ಮೂಲಕ ಪ್ರಾದೇಶಿಕ ಅಸಮಾನತೆ ಮತ್ತು ವಲಯಗಳ ಅಸಮಾನತೆ ತೊಡೆದು ಹಾಕಬೇಕೆಂದು ತಿಳಿಸಿತು. ಈ ನಿಯಮಗಳು ಗ್ರಾಮೀಣ ಬ್ಯಾಂಕುಗಳಿಗೂ ಅನ್ವಯವಾದುವು.

ಹರಿಜನರಿಗೆ ಸುಮಾರು ರೂ. 40 ಕೋಟಿ ಮೀಸಲಿರಿಸಿ ಶೇ. 4ರಂತೆ ಬಡ್ಡಿ ವಿಧಿಸಿ ಸಣ್ಣ ಪ್ರಮಾಣದ ಕೈಗಾರಿಕೆಗಳ ಸ್ಥಾಪನೆಗೆ ಉತ್ತೇಜನ ನೀಡಿದುವು. ಮೊದಲು ಖಾಸಗಿ ವಲಯದ ಕೇವಲ ಮೂರು ಬ್ಯಾಂಕುಗಳು ಈ ಭಿನ್ನಕ ಬಡ್ಡಿದರ ಯೋಜನೆಯನ್ನು ಅನುಷ್ಠಾನಗೊಳಿಸಿದುವು. 1977ರ ಜೂನ್ ಅನಂತರ ಎಲ್ಲ ಖಾಸಗಿ ಬ್ಯಾಂಕುಗಳು ಸ್ವತಃ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಮುಂದೆ ಬಂದುವು. ಅದೂ ಅಲ್ಲದೆ ರಾಜ್ಯ ಸರ್ಕಾರಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ಜನಾಂಗಗಳ ಕಲ್ಯಾಣಕ್ಕಾಗಿ ನಿಯಮಿಸಿದ ನಿಗಮಗಳಿಗೂ ಈ ಹೊಸ ಯೋಜನೆಯ ಅನ್ವಯವಾಯಿತು. ಪ್ರತಿ ರಾಜ್ಯದಲ್ಲೂ ಈ ಹೊಸ ಯೋಜನೆಯನ್ನು ಬ್ಯಾಂಕುಗಳು ಅನುಷ್ಠಾನಗೊಳಿಸಿದುವು. ವರ್ಷದಿಂದ ವರ್ಷಕ್ಕೆ ಸಾಲದ ಪ್ರಮಾಣ, ಸಾಲಗಾರರ ಸಂಖ್ಯೆ, ಶೇಕಡಾವಾರು ಸಾಲ ಹೆಚ್ಚುತ್ತ ಬಂದಿವೆ. ದೇಶ ಪ್ರಗತಿಯತ್ತ ಹೆಜ್ಜೆ ಹಾಕುತ್ತಿದೆ.

### ಸಾರ್ವಜನಿಕ ಬ್ಯಾಂಕುಗಳಿಂದ ಭಿನ್ನಕ ಬಡ್ಡಿ ದರ ಯೋಜನೆಯ ಸಾಲಗಳ ವಿವರ

| ವರ್ಷ | ಖಾತೆಗಳ ಸಂಖ್ಯೆ (ಸಾವಿರದಲ್ಲಿ) | ಖಾತೆಗಳ ಹಣದ ಮೊತ್ತ (ಲಕ್ಷ ರೂ.) | ಪ್ರತಿ ಖಾತೆಗೆ ನೀಡಿದ ಸಾಲ (ರೂ.) | ಒಟ್ಟು ಸಾಲದಲ್ಲಿ ಶೇಕಡ |
|---|---|---|---|---|
| 1 | 2 | 3 | 4 | 5 |
| 1972 | 26 | 88 | 338 | 0.02 |
| 1973 | 231 | 1,000 | 433 | 0.17 |
| 1974 | 314 | 1,341 | 427 | 0.20 |
| 1975 | 470 | 2,100 | 447 | 0.25 |
| 1976 | 1,010 | 4,720 | 467 | 0.42 |
| 1977 | 11,77,066 | 5,411 | 460 | 0.49 |
| 1978 | 14,72,964 | 7,382 | 501 | 0.60 |
| 1979 | 17,56,814 | 10,317 | 587 | 0.69 |
| 1980 | 22,46,487 | 15,698 | 699 | 0.83 |
| 1981 | 29,25,278 | 25,750 | 880 | 1.17 |
| 1982 | 30,84,847 | 28,066 | 910 | 1.05 |

ಭಿನ್ನಕ ಬಡ್ಡಿದರ ಯೋಜನೆಯ ಸಾಲಗಳ ಶೇಕಡಾ ಪ್ರಮಾಣ ಕಡಿಮೆಯಾಗುತ್ತಾ ಬಂದಿದೆ. ಬಹುಶಃ ಸಮಗ್ರಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ. ಆದ್ಯತಾ ವಲಯಗಳಿಗೆ ಬ್ಯಾಂಕುಗಳಿಂದ ಹೆಚ್ಚು ಹೆಚ್ಚು ಸಾಲದ ನೆರವು ಇವುಗಳ ಫಲವಾಗಿ ಈ ಭಿನ್ನಕ ಬಡ್ಡಿದರ ಯೋಜನೆಯ ಸಾಲಗಳು ಕಡಿಮೆಯಾದುವು. ಈ ಯೋಜನೆಯ ಮೂಲಕ ಸಾರಾಸಗಟಾಗಿ ಸಾಲ ನೀಡಿದ್ದರಿಂದ ಶೇ. 67ರಷ್ಟು ಬಾಕಿಗಳು ಉಳಿದವು. ಸಂಪೂರ್ಣ ಪ್ರಯೋಜನ ಪಡೆದ ಫಲಾನುಭವಿಗಳು ಸಾಕಷ್ಟಿದ್ದರೂ ಹಲವರು ಹಣವನ್ನು ನಿಗದಿಯಾದ ಅವಧಿಯಲ್ಲಿ ಬ್ಯಾಂಕುಗಳಿಗೆ ಮರುಪಾವತಿ ಮಾಡದೆ ಬಾಕಿ ಉಳಿಯಿತು.

### ಸಾಧನೆಗಳು

ದೇಶದ ಪ್ರಗತಿಗೆ ಹಾಗೂ ದುರ್ಬಲ ವರ್ಗದವರ ಆರ್ಥಿಕ ಅಸಮಾನತೆಯನ್ನು ಸರಿಪಡಿಸಲು ಮತ್ತು ಹಿಂದುಳಿದವರ, ದುರ್ಬಲ ವರ್ಗದವರ ಏಳಿಗೆಗೆ ಈ ಭಿನ್ನಕ ಬಡ್ಡಿ ದರ ಯೋಜನೆ ಸಹಾಯಕವಾಯಿತು. ಸ್ವಾವಲಂಬನೆಯ ಮೂಲಕ ತಮ್ಮ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಜನರು ಹೆಚ್ಚುಹೆಚ್ಚಾಗಿ ಈ ಯೋಜನೆಯ ಪ್ರಯೋಜನ ಪಡೆದರು.

ಅಂಗವಿಕಲರು, ಗುಡಿ ಕೈಗಾರಿಕೆ ಗೃಹ ಕೈಗಾರಿಕೆಗಳಲ್ಲಿ ನಿರತರಾದವರು, ಅಬಲೆಯರು, ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಜನಾಂಗದವರು ಈ ಯೋಜನೆಯ ಪ್ರಯೋಜನದಿಂದ ಸ್ವಾವಲಂಬಿಗಳಾದರು. ದೇಶದ ಬಡತನದ ರೇಖೆಯಿಂದ ಮೇಲೆ ಬರಲು ಜನರಿಗೆ ಈ ಯೋಜನೆ ಉಪಯುಕ್ತವಾಯಿತು.

### ವೈಫಲ್ಯಗಳು

ಆರ್ಥಿಕವಾಗಿ ಹಿಂದುಳಿದ ದುರ್ಬಲ ವರ್ಗದವರಿಗೆ ಸಹಾಯ ಮಾಡಲು ಬ್ಯಾಂಕುಗಳು ಮುಂದೆ ಬಂದರೂ ಮಧ್ಯವರ್ತಿಗಳ, ದಳ್ಳಾಳಿಗಳ ಶೋಷಣೆಗೆ ಜನರು ಗುರಿಯಾಗಿ, ಸ್ವೀಕರಿಸಿದ ಸಾಲದ ಬಹು ಪಾಲನ್ನು ಲಂಚದ ರೂಪದಲ್ಲಿ ಅವರಿಗೆ ನೀಡಿ ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುವಲ್ಲಿ ಹಲವರು ಅಸಮರ್ಥರಾದರು. ಸಾಲ ಮರುಪಾವತಿ ಮಾಡದೆ, ಹಲವು ಖಾತೆಗಳು ನವೀಕರಣ ಹೊಂದದೆ ಸಾಲಗಳು ಬ್ಯಾಂಕುಗಳಿಗೆ ಬಾಕಿಯಾಗೇ ಉಳಿದುವು. ತಾವು ತೆಗೆದುಕೊಂಡ ಈ ಯೋಜನೆಯ ಅನ್ವಯ ಸಾಲಗಳಿಗೆ ಉದರಿ ಖಾತರಿ ನಿಗಮದಿಂದ ರಕ್ಷೆ ದೊರಕುವುದೆಂದು ಇದರಿಂದ ಬ್ಯಾಂಕುಗಳಿಗೆ ನಷ್ಟವಿಲ್ಲವೆನ್ನುವ ಮಧ್ಯಸ್ಥರ ಪ್ರಚೋದನೆಯಿಂದ ಸಾಲಗಾರರು ಉದ್ದೇಶಪೂರ್ವಕವಾಗಿ ಬಾಕಿದಾರರಾಗಿ ಹಣ ಮರುಪಾವತಿ ಮಾಡದೆ ಉಳಿದರು. ಸಾಲಗಾರರ ಅವಿದ್ಯೆ, ಬಡತನ, ಚಿಂತಿಸುವ ಪರಿಜ್ಞಾನದ ಕೊರತೆ ಇವು ಈ ಯೋಜನೆಯ ವೈಫಲ್ಯಕ್ಕೆ ಕಾರಣಗಳಾಗಿರಬಹುದು.

### ಈ ಕೊರತೆಗಳ ನಿವಾರಣೆಗೆ ಸಲಹೆಗಳು

1 ಬ್ಯಾಂಕುಗಳು ಈ ಯೋಜನೆಯ ಮೂಲಕ ನೇರವಾಗಿ ಸಾಲಗಾರರಿಗೆ ಹಣವನ್ನು ನೀಡಬೇಕು. ದಳ್ಳಾಳಿಗಳನ್ನೂ ಮಧ್ಯಸ್ಥಗಾರರನ್ನೂ ದೂರವಿಡಬೇಕು.

2 ದಸ್ತಾವೇಜೀಕರಣದ ಸಮಯದಲ್ಲಿ ಸಾಲಗಾರರಿಗೆ ಅದನ್ನು ಓದಿ ತಿಳಿಯಪಡಿಸಿ, ಹಣವನ್ನು ಯಾವ ಯಾವ ಅವಧಿಯಲ್ಲಿ ಮರುಪಾವತಿಮಾಡಬೇಕೆನ್ನುವುದನ್ನು ಅರಿಕೆಮಾಡಬೇಕು.

3 ಸಾಲ ನೀಡಿದ ಮೇಲೆ ಸಾಲವನ್ನು ಸಾಲಗಾರ ಸರಿಯಾಗಿ ವಿನಿಯೋಗಿಸಿದ್ದಾನೆಯೆ ಎಂಬುದನ್ನು ಖಚಿತಪಡಿಸಲು ವ್ಯವಸ್ಥಾಪಕರಾಗಲಿ, ಕ್ಷೇತ್ರಾಧಿಕಾರಿಗಳಾಗಲಿ ಮೇಲ್ವಿಚಾರಣೆ ನಡೆಸಬೇಕು. ಚಾಣಾಕ್ಷತೆಯಿಂದ ಸಾಲ ವಸೂಲಾತಿ ಮಾಡಬೇಕು.

ಈ ಯೋಜನೆಯನ್ನು ಜನತೆ ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡಲ್ಲಿ ಅವರು ಸ್ವಾವಲಂಬಿಗಳಾಗುವುದಲ್ಲದೆ ದೇಶದ ಪ್ರಗತಿಯೂ ಆಗುವುದರಲ್ಲಿ ಸಂದೇಹವಿಲ್ಲ. ●

# ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಶ್ರೀಸಾಮಾನ್ಯ

ಲಕ್ಷ್ಮೀನಾರಾಯಣಪ್ಪ

1986 ಏಪ್ರಿಲ್ ತಿಂಗಳಲ್ಲಿ ಶೃಂಗೇರಿಯಲ್ಲಿ ನಡೆದ ಒಂಬತ್ತನೆಯ ಬ್ಯಾಂಕಿಂಗ್ ಕಮ್ಮಟದ ಸಂದರ್ಭದಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಒಂದು ಪ್ರಬಂಧ

ಭಾರತ ಶ್ರೀಮಂತ ರಾಷ್ಟ್ರ. ಆದರೆ ಭಾರತೀಯರು ಮಾತ್ರ ಬಡವರು. ಇದು ಪರದೇಶಗಳಲ್ಲಿ ಭಾರತದ ಬಗ್ಗೆ ಪ್ರಚಲಿತವಿರುವ ಅಭಿಪ್ರಾಯ. ಈ ಅಭಿಪ್ರಾಯ ವಾಸ್ತವ ಸ್ಥಿತಿಯ ನಿಜಚಿತ್ರಣವೂ ಆಗಿದೆ. ನಮ್ಮ ದೇಶದಲ್ಲಿರುವ ವಿಪುಲ ನೈಸರ್ಗಿಕ ಸಂಪತ್ತನ್ನು ಯೋಗ್ಯರೀತಿಯಲ್ಲಿ ಬಳಸಿಕೊಳ್ಳುವುದರ ಮೂಲಕ ಈ ಸ್ಥಿತಿಯನ್ನು ಬದಲಾಯಿಸ ಬಹುದು. ಭಾರತದ ಹೆಚ್ಚಿನಸಂಖ್ಯೆಯ ಜನರು ಏಳು ಲಕ್ಷಕ್ಕೂಹೆಚ್ಚಿನ ಹಳ್ಳಿಗಳಲ್ಲಿ ನೆಲಸಿದ್ದಾರೆ. ದೇಶದ ಅಭಿವೃದ್ಧಿ ಸಾಧಿಸಬೇಕಾದರೆ ಈ ಹಳ್ಳಿಗಳ ಅಭಿವೃದ್ಧಿ ಅತ್ಯಾವಶ್ಯಕ. ಗ್ರಾಮೀಣ ಅಭಿವೃದ್ಧಿ ಗ್ರಾಮೀಣ ಜನತೆಯ ಸರ್ವತೋಮುಖ ಅಭಿವೃದ್ಧಿಯಿಂದ ಮಾತ್ರ ಸಾಧ್ಯ. ಹೀಗಾಗಿ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಶ್ರೀಸಾಮಾನ್ಯನ ಪಾತ್ರ ಅತ್ಯಂತ ಮಹತ್ವದ್ದು.

ಗ್ರಾಮೀಣ ಅಭಿವೃದ್ಧಿ ಶ್ರೀಸಾಮಾನ್ಯನ ಏಳಿಗೆಗಾಗಿಯೇ ಆಗ ಬೇಕಾಗಿರುವುದರಿಂದ ಅಭಿವೃದ್ಧಿ ಕಾರ್ಯಕ್ರಮಗಳು ಗ್ರಾಮೀಣ ಜನತೆಯ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿರಬೇಕಾಗಿರುತ್ತದೆ. ಗ್ರಾಮ ಪ್ರದೇಶದಲ್ಲಿ ವಿಪುಲವಾಗಿ ದೊರೆಯುವ ಸಂಪತ್ತನ್ನು ಆಯಾ ಪ್ರದೇಶದ ಜನರ ಹಿತಾಸಕ್ತಿಯನ್ನು ಗಮನಿಸಿ ಯೋಗ್ಯ ರೀತಿಯಲ್ಲಿ ಬಳಸಿಕೊಳ್ಳಲು ಅಭಿವೃದ್ಧಿ ಕಾರ್ಯಕ್ರಮಗಳು ನಡೆಯ ಬೇಕಾಗಿದೆ. ಆಧುನಿಕ ಮಾನವನಿಗೆ ಬೇಕಾದ ಮೂಲಭೂತ ನಾಗರಿಕ ಸೌಲಭ್ಯಗಳಾದ ಸ್ವಚ್ಛವಾದ ನೀರು, ಶುದ್ಧವಾದ ವಾತಾವರಣ, ವಿದ್ಯಾಭ್ಯಾಸ, ದುಡಿಯುವ ಕರಗಳಿಗೆ ಸಾಕಷ್ಟು ಕೆಲಸ ಇವನ್ನು ಒದಗಿಸಲು ಅಭಿವೃದ್ಧಿ ಕಾರ್ಯಕ್ರಮಗಳು ಅತ್ಯಾವಶ್ಯಕ.

### ಅಭಿವೃದ್ಧಿ ಕಾರ್ಯಕ್ರಮ

ಕರ್ನಾಟಕದಲ್ಲಿ ಗ್ರಾಮೀಣ ಅಭಿವೃದ್ಧಿಗೆ ರಾಜ್ಯ ಸರ್ಕಾರ ವಿಶೇಷ ಒತ್ತುಕೊಟ್ಟಿದೆ. ಗ್ರಾಮೀಣ ಅಭಿವೃದ್ಧಿಯ ಪ್ರಾಮುಖ್ಯವನ್ನು ಅರಿತ ಸರ್ಕಾರ ಈ ದಿಸೆಯಲ್ಲಿ ಹೆಚ್ಚುಹೆಚ್ಚು ಗಮನ ಹರಿಸುತ್ತಿದೆ. ಸರ್ಕಾರದ ಈ ನೀತಿಯಿಂದಾಗಿ ಪ್ರತಿ ಜಿಲ್ಲೆಗೂ ಒಂದರಂತೆ "ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ" ಎಂಬ ಸಂಸ್ಥೆಗಳನ್ನು ಎಲ್ಲಾ ಜಿಲ್ಲೆ ಗಳಲ್ಲೂ ಪ್ರಾರಂಭಿಸಲಾಯಿತು. ಸಣ್ಣ ರೈತರು, ಅತಿ ಸಣ್ಣ ರೈತರು ಮತ್ತು ಕೃಷಿ ಕಾರ್ಮಿಕರ ಅಭಿವೃದ್ಧಿ ಈ ಸಂಸ್ಥೆಗಳ ಗುರಿ. ಇದರ ಮೇಲುಸ್ತುವಾರಿ ನೋಡಿಕೊಳ್ಳಲು ಅಗತ್ಯ ಸಿಬ್ಬಂದಿಯೊಂದಿಗೆ ಜಿಲ್ಲಾಧಿಕಾರಿಗಳ ಹುದ್ದೆಗೆ ಸಮಾನವಾದ ದರ್ಜೆಯ ಪರಿಯೋಜನಾಧಿಕಾರಿ (Project Director) ಹುದ್ದೆಯನ್ನು ಸರ್ಕಾರ ಮಂಜೂರು ಮಾಡಿತು. ಇದರಿಂದ ಗ್ರಾಮೀಣ ಅಭಿವೃದ್ಧಿಗೆ ಸರ್ಕಾರ ನೀಡಿದ ಪ್ರಾಮುಖ್ಯ ಎಷ್ಟೆಂಬುದು ವೇದ್ಯವಾಗುತ್ತದೆ. ಈ ಸಂಸ್ಥೆಗಳು ಕಾರ್ಯ ನಿರ್ವಹಿಸಲಾರಂಭಿಸಿದಂತೆ ಇವುಗಳ ಕಾರ್ಯ ಬಾಹುಳ್ಯ ಎಷ್ಟೆಂಬುದು ಎಲ್ಲರಿಗೂ, ವಿಶೇಷವಾಗಿ ಸರ್ಕಾರಕ್ಕೆ, ಮನದಟ್ಟಾಯಿತು. ಇದರಿಂದಾಗಿ ಸಂಸ್ಥೆಯ ಹೆಸರನ್ನು "ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಘ" ಎಂದು ಬದಲಾಯಿಸಿ ಅದರ ಕಾರ್ಯವ್ಯಾಪ್ತಿಯನ್ನು ಗ್ರಾಮೀಣ ಅಭಿವೃದ್ಧಿಯ ಎಲ್ಲ ಸ್ತರ ಗಳಿಗೂ ವಿಸ್ತರಿಸಲಾಯಿತು. ಗ್ರಾಮೀಣ ಪ್ರದೇಶದಲ್ಲಿರುವ ಬೇಸಾಯಗಾರರು, ಕೃಷಿ ಕಾರ್ಮಿಕರು, ಕುಶಲಕರ್ಮಿಗಳು ಮತ್ತಿತರ ಎಲ್ಲ ವರ್ಗಗಳವರಿಗೂ ಗ್ರಾಮೀಣ ಅಭಿವೃದ್ಧಿಯಲ್ಲಿ ಸಕ್ರಿಯ ಪಾತ್ರ ವಹಿಸಲು ಅವಕಾಶ ನೀಡಲಾಗುತ್ತಿದೆ. ಇಂಥ ವರ್ಗ ಗಳ ಪಟ್ಟಿ ತಯಾರಿಸಿ ಅದರಲ್ಲಿ ಎಲ್ಲ ಕುಟುಂಬಗಳ ವಿವರಗಳನ್ನು ಈ ಸಂಸ್ಥೆಗಳು ಸಂಗ್ರಹಿಸಿವೆ. ಆಯಾ ಕುಟುಂಬದ ಮಾಹಿತಿಯನ್ನು ಪರಿಶೀಲಿಸಿ ಅವರಿಗೆ ಸ್ವಯಂ ಉದ್ಯೋಗಕ್ಕೆ ಅಗತ್ಯವಾದ ಗರಿಷ್ಠ ರೂ. 25,000/–ವರೆಗಿನ ಸಾಲ ಮಂಜೂರಾತಿಗೆ ವಿವಿಧ ಬ್ಯಾಂಕು ಗಳಿಗೆ ಶಿಫಾರಸು ಮಾಡಲಾಗುತ್ತಿದೆ. ಈ ರೀತಿ ನೀಡಲಾದ ಸಾಲ ಕಡಿಮೆ ಬಡ್ಡಿ ದರ ಉಳ್ಳದ್ದಾಗಿರುತ್ತದೆ. ನಿಗದಿಯಾದ ಸಮಯ ದಲ್ಲಿ ಸಾಲ ಹಿಂದಿರುಗಿಸಿದಲ್ಲಿ 25% ರಷ್ಟು ರಿಯಾಯಿತಿಯನ್ನು ಸಾಲಗಾರರು ಪಡೆಯುವರು. ಈ ಮೊಬಲಗನ್ನು ಸಂಬಂಧಪಟ್ಟ ಬ್ಯಾಂಕಿಗೆ ಸರ್ಕಾರವೇ ತುಂಬಿಕೊಡುವುದು. ಹೀಗಾಗಿ ಗ್ರಾಮೀಣ ಅಭಿವೃದ್ಧಿಯಲ್ಲಿ ಸರ್ಕಾರ ತನ್ನ ಮಧ್ಯಸ್ಥಿಕೆಯ ಮೂಲಕ ಬ್ಯಾಂಕು ಗಳು ಮತ್ತು ಶ್ರೀಸಾಮಾನ್ಯನನ್ನು ಬೆಸೆದಿದೆ.

### ಲೋಪದೋಷಗಳು

ಈ ಯೋಜನೆಯಲ್ಲಿ ಲೋಪದೋಷಗಳೂ ಇಲ್ಲದಿಲ್ಲ. ಪ್ರಥಮ ವಾಗಿ ಸ್ವಯಂಉದ್ಯೋಗ ಬಯಸುವ ಎಲ್ಲರಿಗೂ ಆರ್ಥಿಕ ಸಹಾಯ ಒದಗದಿರುವುದು. ಸಾಲ ಪಡೆಯಲು ಇಚ್ಛಿಸುವವರ ಸಂಖ್ಯೆ ಅಗಾಧವಾಗಿರುವುದರಿಂದ ಈ ಸಮಸ್ಯೆ ಉದ್ಭವಿಸಿದೆ. ಕ್ರಮೇಣ ಪರಿಸ್ಥಿತಿ ಸುಧಾರಿಸುವ ನಿರೀಕ್ಷೆ ಇದೆ· ಪಡೆದ ಸಾಲ ಸಮಯಕ್ಕೆ ಸರಿಯಾಗಿ ಹಿಂದಿರುಗಿಸದಿರುವುದು ಎರಡನೆಯ ಸಮಸ್ಯೆ. ಇದಕ್ಕೆ ಕುಟುಂಬದ ಕಡುಬಡತನದ ಆರ್ಥಿಕ ಸ್ಥಿತಿ ಮತ್ತು ಲಾಭದಾಯಕ ವಲ್ಲದ ಉದ್ಯಮದಲ್ಲಿ ಅಥವಾ ಅನುತ್ಪಾದಕ ಕಾರ್ಯಗಳಲ್ಲಿ ಹಣ ತೊಡಗಿಸುವಿಕೆ ಒಂದು ಕಾರಣವಾದರೆ, ಸರ್ಕಾರದಿಂದ ಮಂಜೂರಾದ ಧನ ಸಹಾಯವೆಂದು ತಿಳಿದು, ಹಿಂದಿರುಗಿಸುವ ಅಗತ್ಯವಿಲ್ಲವೆಂದು ಭಾವಿಸುವ ಮನೋಧರ್ಮ ಇನ್ನೊಂದು ಕಾರಣವಾಗಿರುತ್ತದೆ. ಸರ್ಕಾರದ ಸಿಬ್ಬಂದಿಯನ್ನೂ ಸಾಲ ವಸೂಲಿಯಲ್ಲಿ ತೊಡಗಿಸುವ ಯೋಜನೆ ಇದೆಯಾದರೂ ಈ ಪ್ರಯೋಗ ಇನ್ನೂ ಯಶಸ್ವಿ ಯಾಗಿಲ್ಲ. ಸಾಲ ಮರುಪಾವತಿ ಈಗಲೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಅದು ಗ್ರಾಮೀಣ ಅಭಿವೃದ್ಧಿ ಸಂಘದ ಯೋಜನೆಯ ಒಂದು ಕಪ್ಪು ಚುಕ್ಕೆಯಾಗಿಯೇ ಉಳಿದಿದೆ. ಜಿಲ್ಲಾ ಗ್ರಾಮೀಣ

---

ಲಕ್ಷ್ಮೀನಾರಾಯಣಪ್ಪ : ತಾಲ್ಲೂಕು ಶಿರಸ್ತೇದಾರ್, ತಾಲ್ಲೂಕು ಕಛೇರಿ, ಶೃಂಗೇರಿ

ಅಭಿವೃದ್ಧಿ ಸಂಸ್ಥೆಯಿಂದ ಶಿಫಾರಸಾದ ಎಲ್ಲ ಅರ್ಜಿದಾರರಿಗೂ ಅವರು ಕೇಳಿದಷ್ಟು ಮೊಬಲಗನ್ನು ಸಾಲ ಮಂಜೂರು ಮಾಡುತ್ತಿಲ್ಲವೆಂದು ಬ್ಯಾಂಕುಗಳ ಮೇಲೆ ದೂರು ಸಾಮಾನ್ಯವಾಗಿ ಕೇಳಿಬರುತ್ತಿದೆ. ಇದು ವಾಸ್ತವ ಸಂಗತಿಯೂ ಹೌದು. ಸಾಲ ನೀಡುವುದು ಠೇವಣಿದಾರನ ಹಣ. ಅದನ್ನು ಪಡೆದವರು ಹಿಂದಿರುಗಿಸುವ ಸಾಮರ್ಥ್ಯ ಹೊಂದಿರುವುದನ್ನೂ ಸಾಲದ ಮೊಬಲಗನ್ನು ಪಡೆದ ಉದ್ದೇಶಕ್ಕೇ ಉಪಯೋಗಿಸುವ ಅರ್ಜಿದಾರನ ಪ್ರಾಮಾಣಿಕತೆಯನ್ನೂ ಬ್ಯಾಂಕು ಖಚಿತಪಡಿಸಿಕೊಳ್ಳಬೇಕಾದ್ದು ಅದರ ಕರ್ತವ್ಯವಾಗಿರುತ್ತದೆ. ಇದಲ್ಲದೆ ಏಜೆಂಟರುಗಳ ಕೈವಾಡ ಮತ್ತು ಪುಢಾರಿಗಳ ಮಧ್ಯಪ್ರವೇಶ ಮುಂತಾದವುಗಳಿಂದ ಸಮಸ್ಯೆಗಳು ಜಟಿಲವಾಗುತ್ತಿರುವ ಸಂಭವವೂ ಇದೆ. ಇಷ್ಟೆಲ್ಲಾ ತೊಡಕುಗಳಿದ್ದರೂ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಘಗಳು ತಮ್ಮ ಪಾತ್ರ ನಿರ್ವಹಿಸುವಲ್ಲಿ ತಕ್ಕಮಟ್ಟಿಗೆ ಯಶಸ್ವಿಯಾಗುತ್ತಿವೆ ಎಂದು ಹೇಳಬೇಕು. ಕಾಲ ಕಳೆದಂತೆ ಈ ಸಮಸ್ಯೆಗಳು ಪರಿಹಾರವಾಗುವ ಸಂಭವ ಇರುವುದರಿಂದ ಈ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಇನ್ನೂ ಹೆಚ್ಚಿನ ಪ್ರಗತಿ ಸಾಧಿಸಬಹುದಾಗಿದೆ.

### ಕೇಂದ್ರ ಸರ್ಕಾರದ ಪಾತ್ರ

ಗ್ರಾಮೀಣ ಅಭಿವೃದ್ಧಿಯಲ್ಲಿ ಕೇಂದ್ರ ಸರ್ಕಾರದ ಪಾತ್ರವೂ ಗಣನೀಯವಾಗಿರುತ್ತದೆ. ಸ್ವಾತಂತ್ರ್ಯಾನಂತರದ ಭಾರತದಲ್ಲಿ ಕೇಂದ್ರ ಸರ್ಕಾರ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಅಡಿಯಲ್ಲಿ ಹಲವಾರು ಹೆಜ್ಜೆಗಳನ್ನು ದೃಢವಾಗಿ ಇಟ್ಟಿದೆ. ಪ್ರಾರಂಭದಲ್ಲಿ ಗ್ರಾಮೀಣ ಅಭಿವೃದ್ಧಿ ಯೋಜನೆಗಳ ಅನುಷ್ಠಾನಕ್ಕಾಗಿ ಜನಸಂಖ್ಯಾಧಾರಿತ ಸಮುದಾಯ ಅಭಿವೃದ್ಧಿ ಕ್ಷೇತ್ರಗಳನ್ನು ರಾಷ್ಟ್ರಾದ್ಯಂತ ಗುರುತಿಸಿ ಆಯಾ ರಾಜ್ಯ ಸರ್ಕಾರಗಳ ಮುಖಾಂತರ ಹಲವಾರು ಯೋಜನೆಗಳನ್ನು ಜಾರಿಗೊಳಿಸಿದೆ. ಇವುಗಳ ಮೇಲುಸ್ತುವಾರಿಯನ್ನು ಆಯಾ ರಾಜ್ಯ ಸರ್ಕಾರಗಳಿಗೆ ವಹಿಸಿದ್ದರಿಂದ ರಾಜ್ಯ ಸರ್ಕಾರಗಳೂ ತಮ್ಮ ಯೋಜನೆಗಳನ್ನು ಈ ಕ್ಷೇತ್ರಗಳ ಮುಖಾಂತರ ಜಾರಿಗೊಳಿಸಲು ಸಹಾಯಕವಾಯಿತು. ಈ ಸಮುದಾಯ ಅಭಿವೃದ್ಧಿ ಕ್ಷೇತ್ರಗಳು ಕಳೆದ 35 ವರ್ಷಗಳಿಂದಲೂ ಹಲವಾರು ಮಜಲುಗಳನ್ನು ದಾಟಿ ಈಗ ಇರುವಂತೆ ತಾಲ್ಲೂಕು ವ್ಯಾಪ್ತಿಗೊಂದರಂತೆ ಕ್ಷೇತ್ರಾಭಿವೃದ್ಧಿ ಕಛೇರಿಗಳಾಗಿ ಪರಿವರ್ತಿತಗೊಂಡಿವೆ. ಗ್ರಾಮೀಣ ಅಭಿವೃದ್ಧಿಯ ಉದ್ದೇಶದ ಬಹುತೇಕ ಕಾರ್ಯಕ್ರಮಗಳು ಈ ಕಛೇರಿಯ ಮುಖಾಂತರ ಅನುಷ್ಠಾನವಾಗುತ್ತಿವೆ. ಕುಡಿಯುವ ನೀರಿನ ಬಾವಿ, ಸಣ್ಣ ನೀರಾವರಿ ಯೋಜನೆಗಳು, ಗ್ರಾಮಾಂತರ ರಸ್ತೆಗಳ ನಿರ್ಮಾಣ ಮತ್ತು ನಿಗಾವಣೆ, ಪ್ರಾಥಮಿಕ ಶಾಲಾ ಕಟ್ಟಡಗಳ ನಿರ್ಮಾಣ ಮತ್ತು ನಿಗಾವಣೆ, ಗ್ರಾಮೀಣ ಉದ್ಯೋಗ ಭರವಸೆ ಯೋಜನೆ ಮುಂತಾದ ಕಾರ್ಯಗಳನ್ನು ಸ್ವತಃ ಮಾಡುವುದರ ಜೊತೆಗೆ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳ ಯೋಜನೆಯಲ್ಲಿ ಪಾಲ್ಗೊಳ್ಳುವುದರ ಮೂಲಕ ಗ್ರಾಮೀಣ ಅಭಿವೃದ್ಧಿಯಲ್ಲಿ ಈ ಕಛೇರಿಗಳು ಕಾರ್ಯಪ್ರವೃತ್ತವಾಗಿವೆ.

### ಗ್ರಾಮೀಣ ಬ್ಯಾಂಕುಗಳು

ಗ್ರಾಮೀಣ ಜನತೆ ಹೆಚ್ಚಾಗಿ ಬಡತನದ ರೇಖೆಯ ಕೆಳಗಿನ ಹಂತದಲ್ಲಿಯೇ ಇದೆ. ಗ್ರಾಮೀಣ ಅಭಿವೃದ್ಧಿಯ ಮುಖ್ಯ ಗುರಿಗಳಲ್ಲಿ ಈ ಕಳಂಕ ನಿವಾರಣೆಯೂ ಒಂದಾಗಿರುತ್ತದೆ. ಬಡತನ ನಿವಾರಣೆಯಾಗಬೇಕಾದರೆ ಗ್ರಾಮೀಣ ಜನತೆಗೆ ಅಗತ್ಯವಾದ ಬಂಡವಾಳ ಹೂಡಿಕೆಯನ್ನು ಪೂರೈಸುವುದು ಅಗತ್ಯವಾಗಿದೆ. ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿಯೇ ತಮ್ಮ ಪ್ರಾಬಲ್ಯ ಹೊಂದಿರುವ ರಾಷ್ಟ್ರೀಕೃತ ಬ್ಯಾಂಕುಗಳು, ಅನುಸೂಚಿತ ಬ್ಯಾಂಕುಗಳು ಹಾಗೂ ಕಡಿಮೆ ಬಂಡವಾಳ ಹಾಗೂ ಸೀಮಿತ ವ್ಯಾಪ್ತಿಯ ಸಹಕಾರಿ ಬ್ಯಾಂಕುಗಳು ಗ್ರಾಮ ಪ್ರದೇಶದ ಹಣದ ಆವಶ್ಯಕತೆಯನ್ನು ಪೂರೈಸುವ ಪರಿಸ್ಥಿತಿಯಲಿಲ್ಲ. ಇದನ್ನರಿತ ಕೇಂದ್ರ ಸರ್ಕಾರ ಗ್ರಾಮೀಣ ಜನತೆಯ ಸೇವೆಗೆ ಮುಡಿಪಾದ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲು ಮುಂದಾಯಿತು. ಬಳ್ಳಾರಿ ಜಿಲ್ಲೆಯ ತುಂಗಭದ್ರಾ ಗ್ರಾಮೀಣ ಬ್ಯಾಂಕ್ ಇಂಥ ಬ್ಯಾಂಕುಗಳಲ್ಲಿ ಮೊದಲನೆಯದು. ಇಂದು ದೇಶದ ಅನೇಕ ಭಾಗಗಳಲ್ಲಿ ಇಂಥ ಬ್ಯಾಂಕುಗಳು ಹರಡಿವೆ. ಗ್ರಾಮೀಣ ಪ್ರದೇಶದಲ್ಲಿ ಶಾಖೆಗಳನ್ನು ತೆರೆದು ಅಲ್ಲಿಯ ಜನರಲ್ಲಿ ಬ್ಯಾಂಕಿಂಗ್ ವ್ಯವಹಾರವನ್ನು ಉತ್ತೇಜಿಸುವುದು, ಗ್ರಾಮೀಣ ಜನತೆಗೆ ಉದ್ಯೋಗದಲ್ಲಿ ತೊಡಗಲು ಅಗತ್ಯವಾದ ಬಂಡವಾಳಕ್ಕಾಗಿ ಸಾಲ ಸೌಲಭ್ಯ ಒದಗಿಸುವುದು, ಗ್ರಾಮ ಪ್ರದೇಶದಲ್ಲಿ ಉಳಿತಾಯಕ್ಕೆ ಅನುಕೂಲ ಒದಗಿಸುವುದು ಮುಂತಾದವು ಈ ಬ್ಯಾಂಕುಗಳ ಕೆಲವು ಮುಖ್ಯ ಕಾರ್ಯಚಟುವಟಿಕೆಗಳಾಗಿವೆ. ಪ್ರಾಯೋಗಿಕವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಾರಂಭವಾದ ತುಂಗಭದ್ರಾ ಗ್ರಾಮೀಣ ಬ್ಯಾಂಕ್ ಸೇರಿದಂತೆ ರಾಷ್ಟ್ರಾದ್ಯಂತ ಸ್ಥಾಪಿತವಾಗಿರುವ ಈ ಬ್ಯಾಂಕುಗಳು ಅಗಾಧವಾದ ಸಾಧನೆ ಮಾಡಿವೆ. 1985–86ರಲ್ಲಿ ಠೇವಣಿ ಸಂಗ್ರಹಣೆ, ಸಾಲ ನೀಡಿಕೆ ಮತ್ತು ವಸೂಲಿ ಎಲ್ಲದರಲ್ಲಿಯೂ ರಾಷ್ಟ್ರದಲ್ಲಿ ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕ್ ಪ್ರಥಮ ಸ್ಥಾನ ಪಡೆದಿರುವುದು ಕನ್ನಡಿಗರಿಗೆ ಹೆಮ್ಮೆಯ ವಿಷಯ. ಇಂಥ ಬ್ಯಾಂಕುಗಳು ಕ್ರಮೇಣ ಗ್ರಾಮೀಣ ಅಭಿವೃದ್ಧಿಗೆ ಅಗಾಧ ಕಾಣಿಕೆ ಸಲ್ಲಿಸುವುದರಲ್ಲಿ ಸಂದೇಹವಿಲ್ಲ.

ಅಭಿವೃದ್ಧಿ ಕಾರ್ಯಕ್ರಮಗಳು ಎಂದಕೂಡಲೆ ಅವು ಸರ್ಕಾರದ ಕಾರ್ಯಕ್ರಮಗಳೆಂದು ಭಾವಿಸುವುದು ವಾಡಿಕೆಯಾಗಿದೆ. ದೇಶದ ಸರ್ವತೋಮುಖ ಅಭಿವೃದ್ಧಿ ಸಾಧಿಸುವುದು ಸರ್ಕಾರದ ಧ್ಯೇಯವಾದುದರಿಂದ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವುದು ಸರ್ಕಾರದ ಕರ್ತವ್ಯವಾಗಿರುತ್ತದೆ. ಹಾಗೆಂದ ಮಾತ್ರಕ್ಕೆ ಅಭಿವೃದ್ಧಿ ಕಾರ್ಯಕ್ರಮಗಳಿಗೂ ಶ್ರೀಸಾಮಾನ್ಯನಿಗೂ ಸಂಬಂಧವೇನೂ ಇಲ್ಲವೆಂದು ಭಾವಿಸುವುದು ತಪ್ಪು. ವಾಸ್ತವವಾಗಿ ಈ ಕಾರ್ಯಕ್ರಮಗಳು ಶ್ರೀಸಾಮಾನ್ಯನ ಅಭಿವೃದ್ಧಿಯನ್ನೇ ಪ್ರಮುಖ ಗುರಿಯಾಗಿ ಹೊಂದಿರುವುದರಿಂದ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಶ್ರೀಸಾಮಾನ್ಯನಿಗೆ ನೇರವಾಗಿ ಸಂಬಂಧಿಸಿದವುಗಳಾಗಿರುತ್ತವೆ. ಆದ್ದರಿಂದ ಅವುಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಅಭಿವೃದ್ಧಿಹೊಂದುವುದು ಶ್ರೀಸಾಮಾನ್ಯನ ಕರ್ತವ್ಯ ಮತ್ತು ಆವಶ್ಯಕವೂ ಆಗಿರುತ್ತದೆ. ಹೀಗಾದಲ್ಲಿ ಮಾತ್ರ ಗಾಂಧೀಜಿ ಕಂಡ ರಾಮರಾಜ್ಯದ ಕನಸು ನನಸಾಗಲು ಸಾಧ್ಯವಾಗುತ್ತದೆ.

### ಬಡತನ-ನಿರುದ್ಯೋಗ

ಇಂದು ನಮ್ಮ ದೇಶ ಎದುರಿಸುತ್ತಿರುವ ಪ್ರಮುಖ ಸಮಸ್ಯೆಯೆಂದರೆ ಬಡತನ. ಶೇಕಡಾ ಐವತ್ತರಷ್ಟು ಜನರು ಇಂದು ಇನ್ನೂ ಬಡತನದ ರೇಖೆಯ ಕೆಳಗಿದ್ದಾರೆ. ಇದಕ್ಕೆ ಪೂರಕವಾಗಿ ಬೆಳೆದಿದೆ, ನಿರುದ್ಯೋಗ ಸಮಸ್ಯೆ. ಇದು ಅತ್ಯಂತ ಭೀಕರವಾದ ಸಮಸ್ಯೆಯಾಗಿರುತ್ತದೆ. ಈ ಸಮಸ್ಯೆ ದಿನೇ ದಿನೇ ವೃದ್ಧಿಯಾಗುತ್ತಾ ಹೋಗುತ್ತಿದೆ. ಅಭಿವೃದ್ಧಿ ಕಾರ್ಯಕ್ರಮ ಕೈಗೊಳ್ಳಲು

ಸಂಪನ್ಮೂಲದ ಕೊರತೆ ಒಂದು ಕಡೆಯಾದರೆ, ಹಿಡಿತಕ್ಕೆ ಸಿಗದೆ ಜನಸಂಖ್ಯಾ ವೃದ್ಧಿ ಮತ್ತೊಂದು ಕಡೆ ಸೇರಿ ಸಮಸ್ಯೆ ಜಟಿಲಗೊಳ್ಳುತ್ತಾ ಹೋಗಲು ಕಾರಣವಾಗಿದೆ. ಪಂಚವಾರ್ಷಿಕ ಯೋಜನೆಗಳ ಅಗಾಧ ಸಾಧನೆ ಜನಸಂಖ್ಯಾಸ್ಫೋಟದಿಂದಾಗಿ ಗೌಣವೆನಿಸಿದೆ. ಇದು ಪರಿಸ್ಥಿತಿಯ ಭೀಕರತೆಯನ್ನು ಸೂಚಿಸುತ್ತದೆ. ಈ ಸಮಸ್ಯೆಯ ನಿವಾರಣೆಗೆ ಜನಸಂಖ್ಯಾ ಸ್ಫೋಟವನ್ನು ತಡೆಯುವುದರ ಜೊತೆಗೇ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ಕೊಟ್ಟು ಮುಂದುವರಿಯಬೇಕಾದ ಆವಶ್ಯಕತೆ ತುಂಬಾ ಇರುತ್ತದೆ.

ಗ್ರಾಮೀಣ ಪ್ರದೇಶದ ನಿರುದ್ಯೋಗ ಎರಡು ಸ್ತರಗಳನ್ನುಳ್ಳದ್ದಾಗಿರುತ್ತದೆ. ಅವೆಂದರೆ ಅರೆ ಉದ್ಯೋಗ ಮತ್ತು ಸಂಪೂರ್ಣ ನಿರುದ್ಯೋಗ. ಅರೆ ಉದ್ಯೋಗ ನಮ್ಮ ಪ್ರಾಚೀನ ಪರಂಪರೆಯಿಂದ ಉದ್ಭವಿಸಿದ ಸಮಸ್ಯೆಯಾದರೆ ಸಂಪೂರ್ಣ ನಿರುದ್ಯೋಗ ಬೃಹತ್ ಜನಸಂಖ್ಯಾ ಸ್ಫೋಟದಿಂದ ಪ್ರಮುಖವಾಗಿ ಉದ್ಭವಿಸಿರುತ್ತದೆ. ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಪ್ರತಿಯೊಂದು ಕಸಬೂ ಒಂದೊಂದು ಕುಲಕ್ಕೆ ಸೀಮಿತವಾಗಿರುತ್ತದೆ. ಬಹುತೇಕ ಕಸಬುಗಳು ವರ್ಷದಲ್ಲಿ ಕೆಲವು ತಿಂಗಳುಗಳು ಮಾತ್ರ ಉದ್ಯೋಗ ಒದಗಿಸುತ್ತವೆ. ವ್ಯವಸಾಯವೂ ಸೇರಿದಂತೆ ಯಾವುದೇ ಕಸಬೂ ವರ್ಷಪೂರ ಕೆಲಸ ಒದಗಿಸುವುದಿಲ್ಲ. ಹೀಗಾಗಿ ವರ್ಷದ ಉಳಿದ ಸಮಯವನ್ನು ಉದ್ಯೋಗವಿಲ್ಲದೆ ಕಳೆಯಬೇಕಾಗುತ್ತದೆ. ಇನ್ನು ಸಂಪೂರ್ಣ ನಿರುದ್ಯೋಗ ಬೃಹತ್ ಜನಸಂಖ್ಯಾ ಸ್ಫೋಟದಿಂದ ಉಂಟಾಗಿರುವುದಾಗಿರುತ್ತದೆ. ಜನಸಂಖ್ಯೆ ಹೆಚ್ಚಾದುದರಿಂದ ಇದ್ದ ಅರೆ ಉದ್ಯೋಗವೂ ತೀಕ್ಷ್ಣ ರೀತಿಯ ಸ್ಪರ್ಧೆಗೆ ಒಳಗಾಗಿ ಪ್ರಬಲರಾದ ಕೆಲವರ ಸ್ವತ್ತಾಗಿ. ಉಳಿದವರು ನಿರುದ್ಯೋಗಿಗಳಾಗಬೇಕಾಗುತ್ತದೆ. ಆಧುನಿಕ ನಾಗರಿಕತೆಯಿಂದಾಗಿ ಗ್ರಾಮಾಂತರ ಕರಕುಶಲ ಮತ್ತು ಗೃಹ ಕೈಗಾರಿಕೆಗಳಿಗೆ ಬಿದ್ದ ಪೆಟ್ಟಿನಿಂದಾಗಿ ನಿರುದ್ಯೋಗ ಸಮಸ್ಯೆ ಗ್ರಾಮಾಂತರದಲ್ಲಿ ತೀವ್ರವಾಗಿ ಏರಿದೆ. ಇಂತಹ ಇನ್ನೂ ಅನೇಕ ಕಾರಣಗಳು ಗ್ರಾಮಾಂತರದಲ್ಲಿ ನಿರುದ್ಯೋಗಕ್ಕೆ,ತನ್ಮೂಲಕ ಬಡತನದ ವೃದ್ಧಿಗೆ ಕಾರಣವಾಗಿವೆ.

### ಉದ್ಯೋಗ ಭರವಸೆ ಯೋಜನೆ

ಪ್ರಸಕ್ತ ಪ್ರಚಲಿತವಿರುವ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ನಿರುದ್ಯೋಗ ನಿವಾರಣೆಗೆ ಶ್ರಮಿಸಿವೆ. ಇದರಿಂದ ಬಡತನವನ್ನು ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವಾಗುವುದಿಲ್ಲವಾದರೂ ಸರ್ಕಾರದ ಗುರಿ ಸಾಧನೆಗೆ, ಕಡುಬಡವರನ್ನು ಬಡತನದ ರೇಖೆಯಿಂದ ಮೇಲೆತ್ತಲು, ಸಹಾಯಕವಾಗಿವೆ. ರಾಷ್ಟ್ರೀಯ ಗ್ರಾಮಾಂತರ ಉದ್ಯೋಗ ಯೋಜನೆ ಅಂಥ ಕಾರ್ಯಕ್ರಮಗಳಲ್ಲಿ ಒಂದು ಪ್ರಮುಖವಾದ ಕಾರ್ಯಕ್ರಮವಾಗಿದೆ. ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುವ ಬಡ ಕೂಲಿಕಾರರು ಹೆಚ್ಚಾಗಿ ಕೃಷಿ ಕಾರ್ಮಿಕರಾಗಿರುತ್ತಾರೆ. ಕೃಷಿ ಪ್ರಧಾನವಾಗಿ ವರ್ಷದ ಅರ್ಧ ಭಾಗ ಮಾತ್ರ ಇವರಿಗೆ ಉದ್ಯೋಗವನ್ನು ಒದಗಿಸುತ್ತದೆ. ಉಳಿದ ಅರ್ಧ ವರ್ಷ ಉದ್ಯೋಗವಿಲ್ಲದೆ ಪರದಾಡಬೇಕಾದ ಕರುಣಾಜನಕ ಪರಿಸ್ಥಿತಿ ಗ್ರಾಮಾಂತರ ಪ್ರದೇಶದಲ್ಲಿದೆ. ಈ ಸಮಸ್ಯೆಯ ನಿವಾರಣೆಗೆ ಸರ್ಕಾರ ಹಾಕಿಕೊಂಡಿರುವ ಉದ್ಯೋಗ ಭರವಸೆ ಯೋಜನೆ ಬಹಳಷ್ಟು ಪರಿಹಾರ ಒದಗಿಸಿದಂತಾಗಿದೆ. ಸಂಪೂರ್ಣ ಉದ್ಯೋಗ ನೀಡಿಕೆ ಇನ್ನೂ ಸಾಧ್ಯವಾಗಿಲ್ಲವಾದರೂ ಆ ದಿಸೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಲಾಗಿದೆ. ಈ ಯೋಜನೆಯಲ್ಲಿ ಗ್ರಾಮಾಂತರದಲ್ಲಿ ಆಗಬೇಕಾದ ಯೋಜನೆಗಳನ್ನು ಒದಗಿಸಲು ಬೇಕಾದ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಬಡ ಕೂಲಿಕಾರರಿಗೆ ಉದ್ಯೋಗ ಒದಗಿಸಲಾಗುತ್ತಿದೆ. ಶ್ರೀಸಾಮಾನ್ಯನ ಬದುಕಿನ ಮೇಲೆ ನೇರ ಪರಿಣಾಮ ಬೀರುತ್ತಿರುವ ಈ ಯೋಜನೆಯನ್ನು ಜನತೆ ಸದುಪಯೋಗಪಡಿಸಿಕೊಳ್ಳಬೇಕು. ಆಗಬೇಕಾಗಿರುವ ಕಾರ್ಯಗಳ ಬಗ್ಗೆ ಸಲಹೆ ನೀಡುವುದು, ಕಾರ್ಯಗತವಾಗುವಾಗ ಕಂಡುಬರುವ ಲೋಪದೋಷಗಳನ್ನು ಸರ್ಕಾರದ ಗಮನಕ್ಕೆ ತಂದು ಅದರ ನಿವಾರಣೆಗೆ ಸಹಕರಿಸುವುದು ಮತ್ತು ಕಾರ್ಯಕ್ರಮಗಳಲ್ಲಿ ನೇರವಾಗಿ ಪಾಲ್ಗೊಂಡು ಗ್ರಾಮಾಂತರ ಅಭಿವೃದ್ಧಿಗೆ ಶ್ರಮಿಸುವುದು ಜನತೆಯ ಕರ್ತವ್ಯವಾಗಿರುತ್ತದೆ.

### ಸ್ವಯಂ ಉದ್ಯೋಗ ಯೋಜನೆ

ಎಲ್ಲ ಜನರಿಗೂ ಸರ್ಕಾರವೇ ಎಲ್ಲ ಕಾಲಕ್ಕೂ ಉದ್ಯೋಗ ಒದಗಿಸುವುದು ನಮ್ಮ ಈಗಿನ ಪರಿಸ್ಥಿತಿಯಲ್ಲಿ ಸಾಧ್ಯವಿರುವುದಿಲ್ಲ. ಆದರೂ ಸಹ ಲಭ್ಯವಿರುವ ಮಾನವ ಶಕ್ತಿಯ ಸದುಪಯೋಗಕ್ಕಾಗಿ ಉದ್ಯೋಗಗಳನ್ನು ಸೃಷ್ಟಿಸುವ ವಾತಾವರಣ ನಿರ್ಮಿಸುವುದು ಸರ್ಕಾರದ ಕರ್ತವ್ಯವಾಗಿರುತ್ತದೆ. ಸರ್ಕಾರ ತನ್ನ ಈ ಕರ್ತವ್ಯವನ್ನು ನೆರವೇರಿಸಲು ಹಾಕಿಕೊಂಡಿರುವ ಕಾರ್ಯಕ್ರಮಗಳಲ್ಲಿ ಸ್ವಯಂ ಉದ್ಯೋಗ ಯೋಜನೆ ಪ್ರಮುಖವಾದುದಾಗಿರುತ್ತದೆ. ಅಲ್ಪ ಬಂಡವಾಳದಿಂದ ಕೈಗೊಳ್ಳಬಹುದಾದ ಉದ್ಯೋಗಗಳಿಗೆ ಈ ಯೋಜನೆ ವರಪ್ರದಾನವಾಗಿರುತ್ತದೆ. ಕಮ್ಮಾರ, ಬಡಗಿ, ಚಮ್ಮಾರ, ಕ್ಷೌರಿಕ ಮುಂತಾದ, ಮಾನವಶಕ್ತಿಪ್ರಧಾನವಾದ ಮತ್ತು ಅಲ್ಪಬಂಡವಾಳ ಅಗತ್ಯವಾದ ಉದ್ಯೋಗಗಳು ಈ ಯೋಜನೆಯಲ್ಲಿ ಹೆಚ್ಚು ಪ್ರಯೋಜನ ಹೊಂದುವ ಉದ್ಯೋಗಗಳಾಗಿರುತ್ತವೆ. ಇಂಥ ಉದ್ಯೋಗಗಳಿಗೆ ತೊಡಗಿಸಬೇಕಾದ ಬಂಡವಾಳವನ್ನು ವಾಣಿಜ್ಯ ಬ್ಯಾಂಕುಗಳ ಮುಖಾಂತರ ಕಡಿಮೆ ಬಡ್ಡಿ ದರದಲ್ಲಿ ಒದಗಿಸುವುದರ ಮೂಲಕ ಗ್ರಾಮಾಂತರ ನಿರುದ್ಯೋಗ ನಿವಾರಣೆಯ ಒಂದು ಭಾಗವನ್ನು ಸಾಧಿಸಲು ಶ್ರಮಿಸಲಾಗಿದೆ. ಇದೇ ರೀತಿ ಕರಕುಶಲ ಮತ್ತು ಗೃಹ ಕೈಗಾರಿಕೆಗಳಾದ ಬುಟ್ಟಿ ಹೆಣೆಯುವುದು, ಬೀಡಿ ಕಟ್ಟುವುದು ಮುಂತಾದ ಮಾನವಶಕ್ತಿ ಪ್ರಧಾನವಾದ ಉದ್ಯೋಗಗಳೂ ಈ ಯೋಜನೆಯಲ್ಲಿ ಬರುವುದರಿಂದ ಹೆಚ್ಚು ಹೆಚ್ಚು ಉದ್ಯೋಗಗಳ ಸೃಷ್ಟಿಗೆ ಸಹಾಯಕವಾಗಿದೆ. ಯಾವುದೇವೃತ್ತಿಯಲ್ಲಿ ಪರಿಣತರಲ್ಲದವರೂ ಈ ಯೋಜನಯಲ್ಲಿ ಪಾಲ್ಗೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಸ್ವಂತವಾಗಿ ನಡೆಸುವ ಚಿಲ್ಲರೆ ಅಂಗಡಿ, ಜವಳಿ ವ್ಯಾಪಾರ, ಇತರ ವ್ಯಾಪಾರ ಕಾರ್ಯಕ್ರಮಗಳಿಗೂ ಈ ಯೋಜನೆಯಲ್ಲಿ ಅವಕಾಶವಿರುತ್ತದೆ. ಹೀಗಾಗಿ ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಇಚ್ಛಿಸುವ ಜನತೆಗೆ ಈ ಯೋಜನೆ ಸಹಕಾರಿ ಆಗಿರುತ್ತದೆ. ಇದನ್ನು ಸದುಪಯೋಗಪಡಿಸಿಕೊಳ್ಳಬೇಕಾದುದು ಜನತೆಯ ಜವಾಬ್ದಾರಿ.

ದೇಶದ ಅಭಿವೃದ್ಧಿ ಸಾಧ್ಯವಾಗಬೇಕಾದರೆ ಪ್ರತಿಯೊಂದು ಕುಟುಂಬವೂ ಆರ್ಥಿಕವಾಗಿ ಸ್ವಾವಲಂಬಿ ಆಗಬೇಕು. ಇದಕ್ಕಾಗಿ ಪ್ರತಿಯೊಂದು ಕುಟುಂಬವೂ ಪೂರ್ಣ ಉದ್ಯೋಗ ಸಾಧಿಸಬೇಕು. ಪರಂಪರಾನುಗತವಾಗಿ ಬಂದ ಕುಲಕಸುಬುಗಳಷ್ಟಕ್ಕೇ ತನ್ನ ಚಟುವಟಿಕೆಗಳನ್ನು ಸೀಮಿತಗೊಳಿಸದೆ ಲಾಭದಾಯಕವಾದ ಇತರ ಉದ್ಯೋಗಗಳನ್ನೂ ಪರ್ಯಾಯವಾಗಿ ರೂಢಿಸಿಕೊಂಡು ತನ್ನ ಕುಟುಂಬದ, ತನ್ಮೂಲಕ ದೇಶದ ಅಭಿವೃದ್ಧಿಗೆ ಶ್ರಮಿಸಬೇಕು.

ಅನುತ್ಪಾದಕ ಮತ್ತು ಪ್ರತಿಷ್ಠೆಗಾಗಿಯೇ ಮಾಡುವ ಖರ್ಚುಗಳನ್ನು ಸಾಧ್ಯವಾದಷ್ಟೂ ಕಡಿತಗೊಳಿಸಬೇಕು.

ಸ್ವಯಂ ಉದ್ಯೋಗ ಮತ್ತು ಪರ್ಯಾಯ ಉದ್ಯೋಗಗಳಿಗೆ ಸರ್ಕಾರ ನೀಡುತ್ತಿರುವ ಸೌಲಭ್ಯಗಳನ್ನು ಸನ್ಮಾರ್ಗದಲ್ಲಿ ಉಪಯೋಗಿಸಿಕೊಳ್ಳಬೇಕು. ಕಡಿಮೆ ಬಡ್ಡಿ ದರದ ಸಾಲ ಸೌಲಭ್ಯ, ಧನಸಹಾಯಸಹಿತ ಸಾಲ, ನಿರ್ದಿಷ್ಟ ಕ್ಷೇತ್ರಗಳಿಗೆ ಮಾತ್ರ ಮೀಸಲಾದ ಸಾಲ ಮುಂತಾದ ಆರ್ಥಿಕ ಸೌಲಭ್ಯಗಳನ್ನು ಪಡೆಯಲು ಮುಂದಾಗಬೇಕು. ಪಡೆದ ಅನಂತರ ಅದನ್ನು ಯಾವ ಉದ್ದೇಶಕ್ಕಾಗಿ ಪಡೆಯಲಾಗಿದೆಯೋ ಆ ಉದ್ದೇಶಕ್ಕೆ ಮಾತ್ರ ಉಪಯೋಗಿಸಬೇಕು. ಹೀಗಾದಲ್ಲಿ ಸೌಲಭ್ಯ ಪಡೆದ ಕುಟುಂಬಗಳು ಸ್ವಯಂ ಉದ್ಯೋಗವನ್ನು ಸಾಧಿಸಲು ಸಾಧ್ಯವಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಪಡೆದ ಸಾಲವನ್ನು ನಿಯಮಿತ ಸಮಯಗಳಲ್ಲಿ ಅಥವಾ ಸಾಧ್ಯವಾದರೆ ಅದಕ್ಕೂ ಮೊದಲೇ ಹಿಂದಿರುಗಿಸಬೇಕು. ಇಲ್ಲವಾದರೆ ದುಡಿದ ಹಣದ ಬಹುಭಾಗ ಸಾಲದ ಮೇಲಿನ ಬಡ್ಡಿ ಚಕ್ರಬಡ್ಡಿ ತೀರಿಸಲೆಂದೇ ವ್ಯಯವಾಗುವ ಅಪಾಯವಿದೆ. ಇದರಿಂದ ಉದ್ಯೋಗದಲ್ಲಿ ನಿರಾಸಕ್ತಿ ಬೆಳೆಯುವುದಲ್ಲದೆ, ಜೀವನವೇ ಬೇಡವೆನ್ನುವ ಜಿಗುಪ್ಸೆ ಉಂಟಾಗುವ ಸಾಧ್ಯತೆ ಇರುತ್ತದೆ. "ಸಾಲ ಮಾಡಿ ಮನೆ ಕಟ್ಟು, ಮನೆ ಮಾರಿ ಸಾಲ ತೀರಿಸಿದ" ಎಂಬ ಹಳೆಯ ನಾಣ್ಣುಡಿಯೊಂದಿದೆ. ಸ್ವಯಂ ಉದ್ಯೋಗ ಯೋಜನೆಯಲ್ಲಿ ಈ ಪರಿಸ್ಥಿತಿ ಒದಗದಂತೆ ನೋಡಿಕೊಳ್ಳಬೇಕಾದ ಆವಶ್ಯಕತೆ ಬಹಳವಾಗಿ ಇರುತ್ತದೆ.

### ಸಾರ್ವಜನಿಕ ನಿರಾಸಕ್ತಿ

"ರೈಲ್ವೆ ಆಸ್ತಿ ನಿಮ್ಮ ಆಸ್ತಿ." ಇದು ಭಾರತೀಯ ರೈಲ್ವೆಯವರು ಜನತೆಗೆ ಹೊರಿಸಿರುವ ಜವಾಬ್ದಾರಿ. ಅಂದರೆ ರೈಲ್ವೆ ಆಸ್ತಿಯನ್ನು ಸಾರ್ವಜನಿಕರು ಅವರವರ ಮನೆಗೆ ಸಾಗಿಸಬೇಕೆಂಬುದು ಇದರರ್ಥವಲ್ಲ. ಪ್ರತಿಯೊಬ್ಬರೂ ಸಹ ರೈಲ್ವೆ ಆಸ್ತಿಯನ್ನು ಅವರ ಸ್ವಂತ ಆಸ್ತಿಯನ್ನು ಉಪಯೋಗಿಸುವ ರೀತಿಯಲ್ಲಿಯೇ ಅತ್ಯಂತ ಜೋಪಾನವಾಗಿ ಉಪಯೋಗಿಸಿ ಆ ಆಸ್ತಿ ಹೆಚ್ಚು ಉಪಯುಕ್ತವಾಗುವಂತೆ ಮಾಡುವುದೇ ಇದರ ಉದ್ದೇಶವಾಗಿರುತ್ತದೆ. ಅದೇ ರೀತಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸರ್ಕಾರ ಮತ್ತಿತರ ಸಂಘ ಸಂಸ್ಥೆಗಳಿಂದ ನಿರ್ಮಿತವಾದ ಆಸ್ತಿಗಳನ್ನು ಜೋಪಾನವಾಗಿ ಉಪಯೋಗಿಸಿಕೊಳ್ಳುವ ಔದಾರ್ಯ ತೋರಬೇಕು. ಉದಾಹರಣೆಗೆ ಗ್ರಾಮಾಂತರ ಕುಡಿಯುವ ನೀರು ಪೂರೈಕೆ ಯೋಜನೆಯಡಿ ಕೊಳವೆ ಬಾವಿ ಮತ್ತು ಕೈಪಂಪುಗಳನ್ನು ಸರ್ಕಾರ ಒದಗಿಸಿರುವುದನ್ನು ನಾವು ನೋಡಿದ್ದೇವೆ. ಇವುಗಳಲ್ಲಿ ಕೆಲವು ಸದಾ ನಿರುಪಯುಕ್ತವಾಗಿಯೇ ಇರುವುದನ್ನೂ ನಾವು ನೋಡಿದ್ದೇವೆ. ಇದಕ್ಕೆ ತಾಂತ್ರಿಕ ತೊಂದರೆಯೊಂದೇ ಕಾರಣವಾಗಿರುವುದಿಲ್ಲ. ಬದಲಾಗಿ ಇಂತಹ ಆಸ್ತಿಗಳ ಬಗ್ಗೆ ಸಾರ್ವಜನಿಕರ ದಿವ್ಯ ನಿರ್ಲಕ್ಷ್ಯವೂ ಒಂದು ಪ್ರಮುಖ ಕಾರಣವಾಗಿರುತ್ತದೆ. ಇದು ಒಂದು ಉದಾಹರಣೆ ಮಾತ್ರ. ಗ್ರಾಮೀಣ ಅಭಿವೃದ್ಧಿಯ ಎಲ್ಲ ಸ್ತರಗಳಲ್ಲಿಯೂ ಈ ರೀತಿಯ ಸಾರ್ವಜನಿಕ ಅನಾಸಕ್ತಿ ನೀಗಬೇಕಾಗಿದೆ.

### ಮಕ್ಕಳ ವಿದ್ಯಾಭ್ಯಾಸ

ಎಲ್ಲಕ್ಕೂ ಮಿಗಿಲಾಗಿ ಗ್ರಾಮೀಣ ಜನತೆ ಮಕ್ಕಳ ವಿದ್ಯಾಭ್ಯಾಸದಲ್ಲಿ ಹೆಚ್ಚು ಆಸಕ್ತಿ ತೋರಬೇಕು. ಪಟ್ಟಣ ಪ್ರದೇಶದಲ್ಲಿ ವಿದ್ಯಾಭ್ಯಾಸಗಳಿಗೆ ಇರುವ ವಿಪುಲವಾದ ಅವಕಾಶ ಹಳ್ಳಿಗಳಲ್ಲಿ ದೊರೆಯುವುದಿಲ್ಲ. ಆದ್ದರಿಂದ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ವಿದ್ಯಾಭ್ಯಾಸ ಮುಂದುವರಿಸುವಲ್ಲಿ ಹೆಚ್ಚು ತೊಡಕುಗಳು ಇರುತ್ತವೆ. ಆದರೂ, ಇರುವ ಎಲ್ಲ ಸೌಲಭ್ಯಗಳನ್ನೂ ಸಮರ್ಥ ರೀತಿಯಲ್ಲಿ ಬಳಸಿಕೊಂಡು ಜ್ಞಾನಾರ್ಜನೆಗೆ ಸಹಾಯವಾಗುವ ವಿದ್ಯಾಭ್ಯಾಸವನ್ನು ಸಾಧ್ಯವಾದಷ್ಟೂ ಮುಂದುವರಿಸುವ ಪರಿಪಾಠ ಗ್ರಾಮೀಣ ಜನತೆಗೆ ಇರಬೇಕು. ಸಾಕ್ಷರತೆಯ ಪ್ರಮಾಣ ಪಟ್ಟಣಪ್ರದೇಶಕ್ಕಿಂತ ಗ್ರಾಮಾಂತರ ಪ್ರದೇಶಗಳಲ್ಲಿ ಕಡಿಮೆ. ಗ್ರಾಮಾಂತರ ಜನರಲ್ಲಿ ಇರುವ ಕಡುಬಡತನವೂ ಇದಕ್ಕೆ ಒಂದು ಪ್ರಮುಖ ಕಾರಣ. ತುತ್ತಿನ ಚೀಲ ತುಂಬುವುದು ಅಕ್ಷರಾಭ್ಯಾಸಕ್ಕಿಂತ ಹೆಚ್ಚು ಪ್ರಾಶಸ್ತ್ಯ ಪಡೆಯುತ್ತದೆ. ಇದರಿಂದಾಗಿ ನಿರಕ್ಷರಿಗಳ ಸಂಖ್ಯೆ ಯಾವತ್ತೂ ಅಗಾಧವಾಗಿಯೇ ಇದೆ. ಯಾವುದೇ ಕಾರಣಕ್ಕಾಗಿ ಬಾಲ್ಯದಲ್ಲಿ ವಿದ್ಯಾಭ್ಯಾಸದಿಂದ ವಂಚಿತರಾದವರು ವಯಸ್ಕರ ಶಿಕ್ಷಣ ಯೋಜನೆಯ ಮುಖಾಂತರ ಕನಿಷ್ಠ ಪಕ್ಷ ವ್ಯವಹಾರಕ್ಕೆ ಬೇಕಾದ ಅಕ್ಷರಜ್ಞಾನವನ್ನಾದರೂ ಸಂಪಾದಿಸಬೇಕಾಗುತ್ತದೆ.

### ವ್ಯವಹಾರದ ಭಾಷೆ

ಶ್ರೀಸಾಮಾನ್ಯನ ಅಭಿವೃದ್ಧಿಗಾಗಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ರೂಪಿತವಾಗಿರುವುದು ಸರ್ವವಿದಿತ. ಈ ಕಾರ್ಯಕ್ರಮಗಳಲ್ಲಿ ಸಹಕಾರಿ ಮತ್ತು ವಾಣಿಜ್ಯ ಬ್ಯಾಂಕುಗಳನ್ನೂ ತೊಡಗಿಸಿಕೊಂಡಿರುವುದು ಉಚಿತವಾಗಿರುತ್ತದೆ. ದೇಶದ ಆರ್ಥಿಕ ವ್ಯವಹಾರಗಳನ್ನು ನಿಭಾಯಿಸುವ ಬ್ಯಾಂಕುಗಳು ಶ್ರೀಸಾಮಾನ್ಯನ ಶ್ರೇಯೋಭಿವೃದ್ಧಿಗೆ ಶ್ರಮಿಸಬೇಕಾದುದು ಈ ಸಾರ್ವಜನಿಕ ಸಂಸ್ಥೆಗಳ ಮೂಲಭೂತ ಕರ್ತವ್ಯ ಅಲ್ಲದಿದ್ದರೂ ಮಾನವೀಯ ದೃಷ್ಟಿಯಿಂದ ಅಗತ್ಯವಾದುದಾಗಿರುತ್ತದೆ. ರಾಷ್ಟ್ರೀಕರಣ ಪೂರ್ವದಲ್ಲಿ ಕೇವಲ ಉದ್ಯಮಗಳಿಗೆ ಮಾತ್ರ ಸೀಮಿತಗೊಂಡಿದ್ದ ಬ್ಯಾಂಕಿಂಗ್ ವ್ಯವಹಾರ ವಿಶೇಷವಾಗಿ ಬೆಳೆದು ಸಾಲ ನೀಡಿಕೆಗಳು ಇಂದು ಗ್ರಾಮೀಣ ಪ್ರದೇಶದ ಎಲ್ಲ ವ್ಯವಹಾರಗಳಿಗೂ ವಿಸ್ತರಿಸಿರುವುದು ವಾಸ್ತವ ಸಂಗತಿ. ಹೀಗಾಗಿ ಕಳೆದ ಕೆಲವಾರು ವರ್ಷಗಳಿಂದ ಬ್ಯಾಂಕುಗಳು ಶ್ರೀಸಾಮಾನ್ಯನೊಂದಿಗೆ ನಿಕಟಸಂಬಂಧ ಬೆಳೆಸಿಕೊಂಡಿವೆ. ಜನತೆಯೊಡನೆ ನಿಕಟ ಸಂಪರ್ಕ ಹೊಂದುತ್ತಿರುವ ಈ ಆರ್ಥಿಕ ಸಂಸ್ಥೆಗಳು ಆಯಾ ಪ್ರದೇಶದ ಜನಗಳ ಭಾಷೆಯಲ್ಲಿಯೇ ವ್ಯವಹಾರ ನಡೆಸಬೇಕಾದುದು ಅತ್ಯಾವಶ್ಯಕವಾಗಿರುತ್ತದೆ. ಈ ಹಿನ್ನಲೆಯಲ್ಲಿ ಕರ್ನಾಟಕದಲ್ಲಿ ವ್ಯವಹಾರ ನಡೆಸಬೇಕಾದ ಎಲ್ಲ ಬ್ಯಾಂಕುಗಳೂ ಸಹ ಕನ್ನಡದಲ್ಲಿಯೇ ವ್ಯವಹಾರ ನಡೆಸಬೇಕಾದ ಸಂದರ್ಭ ಒದಗಿಬಂದಿದೆ. ಈಗಿನ ವ್ಯವಹಾರ ಬಹುತೇಕ ಆಂಗ್ಲ ಭಾಷೆಯಲ್ಲಿಯೇ ನಡೆಯುತ್ತಿರುವುದು ಕನ್ನಡಿಗರ ದುರ್ದೈವ. ಕನ್ನಡಿಗರೇ ವ್ಯವಹಾರ ನಡೆಸುವ ಬ್ಯಾಂಕಿಂಗ್ ವ್ಯವಹಾರದಲ್ಲಿ ಬಳಸುವ ಭಾಷೆ ಮಾತ್ರ ಆಂಗ್ಲ ಭಾಷೆ ಆಗಿರುವುದು ವಿಷಾದನೀಯ.

ಕರ್ನಾಟಕ ಭಾರತದ ಬ್ಯಾಂಕುಗಳ ತೌರೂರು ಎಂದರೆ ಅತಿಶಯೋಕ್ತಿಯಾಗಲಾರದು. ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕರ್ನಾಟಕ ಬ್ಯಾಂಕ್, ಕೆನರಾ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಕಾರ್ಪೊರೇಷನ್ ಬ್ಯಾಂಕ್, ವಿಜಯಾ ಬ್ಯಾಂಕ್, ವೈಶ್ಯ ಬ್ಯಾಂಕ್ ಇಂಥ ಪ್ರಮುಖ ರಾಷ್ಟ್ರಮಟ್ಟದ ಬ್ಯಾಂಕುಗಳ ಉಗಮಸ್ಥಾನ ಕರ್ನಾಟಕ. ಅಲ್ಲದೆ ಅನೇಕ ಪಟ್ಟಣ ಸಹಕಾರ ಬ್ಯಾಂಕುಗಳು, ಜಿಲ್ಲೆಗೊಂದರಂತೆ ಇರುವ ಕೇಂದ್ರ ಸಹಕಾರಿ ಬ್ಯಾಂಕುಗಳು ಕರ್ನಾಟಕ

ದಲ್ಲಿ ಬ್ಯಾಂಕಿನ ಬೆಳವಣಿಗೆಯ ಉತ್ಕೃಷ್ಟತೆಯ ದ್ಯೋತಕವಾಗಿವೆ. ದೇಶದ ಇತರ ಬ್ಯಾಂಕುಗಳಿಗಿಂತ ಕರ್ನಾಟಕದಲ್ಲಿ ಬ್ಯಾಂಕುಗಳು ಹೆಚ್ಚು ಪ್ರಮಾಣದಲ್ಲಿದ್ದು, ಶ್ರೀಸಾಮಾನ್ಯನೊಡನೆ ನಿಕಟಸಂಪರ್ಕ ಹೊಂದಿದ್ದು, ದಿನನಿತ್ಯ ಅವನ ಸೇವೆಯಲ್ಲಿ ತೊಡಗಿವೆ. ಶ್ರೀಸಾಮಾನ್ಯನಿಗೆ ಬ್ಯಾಂಕಿನ ಎಲ್ಲ ವ್ಯವಹಾರಗಳೂ ಅರ್ಥವಾಗಿ ಅದರ ಸದುಪಯೋಗ ಪಡೆಯಲು ಕರ್ನಾಟಕದಲ್ಲಿ ಬ್ಯಾಂಕಿಂಗ್ ವ್ಯವಹಾರ ಕನ್ನಡದಲ್ಲಿ ನಡೆಯುವುದು ಅವಶ್ಯವಾಗಿರುತ್ತದೆ. ಕರ್ನಾಟಕ ರಾಜ್ಯ ಸರ್ಕಾರ ಈ ದಿಸೆಯಲ್ಲಿ ಈಗಾಗಲೇ ಕಾರ್ಯಪ್ರವೃತ್ತವಾಗಿದ್ದು, ಆಡಳಿತದಲ್ಲಿ ಕನ್ನಡಕ್ಕೇ ಅಗ್ರಪೂಜೆ ಸಲ್ಲುತ್ತಿದೆ. ಸಾರ್ವಜನಿಕ ಸಂಸ್ಥೆಗಳಾದ ಸಹಕಾರಿ ಮತ್ತು ವಾಣಿಜ್ಯ ಬ್ಯಾಂಕುಗಳಲ್ಲಿಯೂ ವ್ಯವಹಾರಭಾಷೆ ಕನ್ನಡವೇ ಆಗುವ ಸಮಯ ದೂರ ಉಳಿಯದಂತಾಗಲಿ ಎಂದು ಕನ್ನಡಿಗರಾದ ನಾವೆಲ್ಲ ಹಾರೈಸೋಣ. ●


*With best compliments from*

# M/s. Mudugal Bhimasenappa & Bros.,

*GODREJ WHOLESALE DEALERS*

*Phone No. 2116*

*For your requirements like*

**STORWELS**
**TABLES**
**CHAIRS**
**TYPEWRITERS**
**REFRIGERATORS AND**
**SECURITY EQUIPMENTS etc.,**

**Godrej ®**
*your guarantee of goodness in Steel Furniture*

***Head office***
**HARAPANAHALLI**

***Branches***
**Bellary, Hubli, Dharwad, Bidar, Belgaum, Raichur Gulbarga, Kurnool and Mahboob Nagar (A.P.)**

# ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಫಲಾಫಲಗಳು

·ಎಚ್. ಜಯಕೀರ್ತಿ

ಭಾರತ ತೃತೀಯ ಜಗತ್ತಿನ ರಾಷ್ಟ್ರಗಳಲ್ಲೊಂದು. ಜನಸಂಖ್ಯಾ ಸ್ಫೋಟ, ಬಡತನ, ನಿರುದ್ಯೋಗ, ಅನಕ್ಷರತೆಯೇ ಮೊದಲಾದ ಕಾರಣಗಳಿಂದಾಗಿ ಇದು ಹಿಂದುಳಿದಿದೆ. ಅದರಲ್ಲೂ ಶೇಕಡ 70ರಷ್ಟು ಜನ ಗ್ರಾಮಾಂತರ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಅಂಥ ಮಂದಿಯ ಅಭಿವೃದ್ಧಿಗೋಸ್ಕರಸರ್ಕಾರ ಹಿಂದಿನಿಂದಲೂ ಹಲವಾರು ಯೋಜನೆಗಳನ್ನು ರೂಪಿಸಿ, ಜಾರಿಗೆ ತಂದಿದೆಯಲ್ಲದೆ, ಈ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿಯನ್ನೂ ಸಾಧಿಸಿದೆ. ಆ ಯೋಜನೆಗಳ ಪೈಕಿ ಮುಖ್ಯ ವಾದವು ಇವು :

1 1946ರಲ್ಲಿ ಮದ್ರಾಸಿನಲ್ಲಿ ಜಾರಿಗೆ ತಂದ ಫಿರ್ಕಾ ಅಭಿವೃದ್ಧಿ ಕಾರ್ಯಕ್ರಮ
2 1952ರಲ್ಲಿ ಜಾರಿಗೆ ಬಂದ ಸಮುದಾಯ ಅಭಿವೃದ್ಧಿ ಕಾರ್ಯ ಕ್ರಮ
3 1960–61ರಲ್ಲಿ ಜಾರಿಗೆ ತಂದ ತೀವ್ರ ಕೃಷಿಕಾರ ಅಭಿವೃದ್ಧಿ ಕಾರ್ಯಕ್ರಮ
4 ಸಣ್ಣ, ಅತಿ ಸಣ್ಣ ಮತ್ತು ಕೃಷಿ ಕೂಲಿಗಾರರ ಅಭಿವೃದ್ಧಿ ಸಂಸ್ಥೆಗಳನ್ನೊಳಗೊಂಡ ಪರಿಯೋಜನೆಗಳು
5 ಬರಪೀಡಿತ ಪ್ರದೇಶ ಕಾರ್ಯಕ್ರಮ
6 ಆಯಕಟ್ಟು ಪ್ರದೇಶಾಭಿವೃದ್ಧಿ ಯೋಜನೆ
7 ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆ

ಈ ಮೇಲಿನ ಪ್ರತಿಯೊಂದು ಕಾರ್ಯಕ್ರಮವನ್ನು ಜಾರಿಗೊಳಿಸು ವಾಗಲೂ ಕೆಲವು ಅಡೆತಡೆಗಳು ಎದುರಾದುವು: 1 ನಿಜವಾದ ಫಲಾನುಭವಿಗಳನ್ನಾರಿಸುವಲ್ಲಿನ ಅಸಾಮರ್ಥ್ಯ; 2 ಕಟ್ಟುನಿಟ್ಟಾಗಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವಲ್ಲಿ ಆಡಳಿತ ಯಂತ್ರದ ಅಸಾಮರ್ಥ್ಯ; 3 ಕಾರ್ಯಕ್ರಮಗಳಿಂದ ಲಾಭಪಡೆಯುವ ಉದ್ದೇಶ ದಿಂದ ಶ್ರೀಮಂತ ಹಾಗೂ ಪ್ರಭಾವಶಾಲಿಗಳಿಂದ ಬರುವ ಒತ್ತಡ. ಈ ಕಾರಣಗಳಿಂದಾಗಿ ಗುರಿ ತಲುಪುವುದಾಗಲಿ, ನೈಜ ಅಭಿವೃದ್ಧಿ ಯಾಗಲಿ ಸಾಧ್ಯವಾಗಲಿಲ್ಲ. ಕೆಲವೇ ಮಂದಿ ಇಂಥ ಯೋಜನೆಗಳ ಲಾಭ ಪಡೆದು ಗ್ರಾಮೀಣ ಪ್ರದೇಶದ ಜನರು ದಾರಿದ್ರ್ಯದಿಂದ ಬದುಕುಳಿಯುವುದು ಕಷ್ಟವಾಗಿದೆಯಲ್ಲದೆ ಸಂಪತ್ತು ಹಾಗೂ ವರಮಾನದ ವಿತರಣೆಯಲ್ಲಿ ಅಸಮಾನತೆ, ನಿರುದ್ಯೋಗ, ಅಮಾನ ವೀಯ ಬದುಕು ಮುಂತಾದ ಸಮಸ್ಯೆಗಳು ತೀವ್ರವಾಗಿವೆ.

ಎಚ್. ಜಯಕೀರ್ತಿ : ಕೃಷಿ ಅಭಿವೃದ್ಧಿ ಶಾಖೆ, ಮೈಸೂರು ಬ್ಯಾಂಕು, ಹುಣಸೂರು 571 105

**ಕಾರ್ಯಕ್ರಮದ ಸ್ವರೂಪ**

1979–80ರ ಬೆಲೆ ಮಟ್ಟದಲ್ಲಿ ಗ್ರಾಮೀಣ ಪ್ರದೇಶದಲ್ಲಿಯ ತಲಾ ಆದಾಯ ತಿಂಗಳಿಗೆ ರೂ. 76 ಇತ್ತು. ಸರಾಸರಿ ಐದು ಜನರ ಕುಟುಂಬದ ವಾರ್ಷಿಕ ಆದಾಯ ರೂ. 4,560 ಎಂದು ಪರಿಗಣಿಸಿ, ಇದಕ್ಕೂ ಕಡಿಮೆ ವರಮಾನದ ಕುಟುಂಬಗಳನ್ನು ದಾರಿದ್ರ್ಯ ರೇಖೆ ಯಿಂದ ಮೇಲಕ್ಕೆತ್ತಲು ಭಾರತ ಸರ್ಕಾರ ತನ್ನ 6ನೆಯ ಪಂಚ ವಾರ್ಷಿಕ ಯೋಜನೆಯ ಅಡಿಯಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಈ ಯೋಜನೆ ಗ್ರಾಮೀಣ ಜನತೆಯ ನಿರುದ್ಯೋಗ ಹಾಗೂ ಬಡತನದ ನಿವಾರಣೆಯ ನಿಟ್ಟಿನಲ್ಲಿ ಒಂದು ಕುಟುಂಬವನ್ನು ಒಂದು ಘಟಕವಾಗಿ ಪರಿಗಣಿಸಿ, ಅದರ ಸರ್ವತೋಮುಖ ಅಭಿವೃದ್ಧಿಗೆ ಬೇಕಾದ ತಾಂತ್ರಿಕ ಸಾಧ್ಯತೆಗಳುಳ್ಳ ಮತ್ತು ಆರ್ಥಿಕ ಜೀವಂತಿಕೆಯನ್ನು ಒದಗಿಸಬಲ್ಲ ವ್ಯವಸ್ಥೆಯನ್ನು ಕಲ್ಪಿಸುವುದು ಇದರ ಉದ್ದೇಶ. ಹಿಂದಿನ ಪ್ರತಿಯೊಂದು ಯೋಜನೆ ಯಲ್ಲೂ ಯಾವುದಾದರೊಂದು ಸಮುದಾಯದ ಅಥವಾ ಗುಂಪಿನ ಅಭಿವೃದ್ಧಿಯನ್ನು ಗುರಿಯಾಗಿರಿಸಲಾಗಿತ್ತು. ಆದರೆ ಈ ಯೋಜನೆ ಯಲ್ಲಿ ಸಮಗ್ರ ಗ್ರಾಮೀಣ ಜನತೆಯ ಅಭಿವೃದ್ಧಿಯನ್ನೇ ಗುರಿಯಾ ಗಿರಿಸಿಕೊಳ್ಳಲಾಗಿದೆ. ಇದರಂತೆ ಭಾರತದ ಹಳ್ಳಿಗಳಲ್ಲಿ ವಾಸವಾಗಿರುವ ಬಡ ಜನರನ್ನು ದಾರಿದ್ರ್ಯ ರೇಖೆಯಿಂದ ಮೇಲೆತ್ತುವುದೇ ಇದರ ಉದ್ದೇಶ. 6ನೆಯ ಯೋಜನೆಯಲ್ಲಿ ಸುಮಾರು 15 ಲಕ್ಷ ಕುಟುಂಬ ಗಳನ್ನು ತಮ್ಮ ಕಾಲಮೇಲೆ ನಿಲ್ಲುವಂತೆ ಮಾಡಲು ಪ್ರಯತ್ನಿಸಲಾ ಯಿತು. ದೇಶದಲ್ಲಿರುವ ಒಟ್ಟು 5,011 ಬ್ಯಾಂಕ್ ಕಛೇರಿಗಳಿಂದ ಪ್ರತಿ ಬ್ಯಾಂಕಿಗೆ 3,000 ಕುಟುಂಬಗಳನ್ನು ಆರಿಸಿ, ಅವರ ಆದಾಯವನ್ನು ಹೆಚ್ಚಿಸಬಲ್ಲ ಆಸ್ತಿಗಳನ್ನು [ಹಸು, ಎಮ್ಮೆ, ಎತ್ತು, ಕುರಿ, ಆಡು, ವ್ಯಾಪಾರ, ಸಣ್ಣ ನೀರಾವರಿ ಇತ್ಯಾದಿ] ತೆಗೆಸಿಕೊಟ್ಟು ಬಡನದ ರೇಖೆ ಯಿಂದ ಮೇಲೆ ಬರುವಂತೆ ಪ್ರಯತ್ನಿಸಲಾಗಿದೆ.

1980ರ ಅಕ್ಟೋಬರ್ 2ರಂದು ಈ ಕಾರ್ಯಕ್ರಮವನ್ನು ಆರಂಭಿಸಲಾಯಿತು. ಭೂವಿಹೀನರು, ಕೆಲಸಗಾರರು, ಹರಿಜನ ಗಿರಿ ಜನರು, ರೈತರು, ಮುಕ್ತರಾದ ಜೀತದಾಳುಗಳು ಮತ್ತು ಸಣ್ಣ ಹಾಗೂ ಅತಿಸಣ್ಣ ರೈತರನ್ನು ಫಲಾನುಭವಿಗಳಾಗಿ ಆರಿಸಿ, ಅವರ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಲು ಯೋಗ್ಯವಾದ ಸಂಪಾದನೆ ಯನ್ನು ಹೆಚ್ಚಿಸಬಲ್ಲ ವ್ಯವಸ್ಥೆಯನ್ನು ಮಾಡಿಕೊಡಲಾಯಿತು. ಪ್ರತಿ ಬ್ಲಾಕಿನಿಂದ ಎರಡು ಸಾವಿರ ಕುಟುಂಬಗಳನ್ನು ವ್ಯವಸಾಯ ಹಾಗೂ ಅದಕ್ಕೆ ಸಂಬಂಧಿಸಿದ ವಿಭಾಗದಿಂದಲೂ 500 ಕುಟುಂಬಗಳನ್ನು ಗ್ರಾಮ ಹಾಗೂ ಗುಡಿ ಕೈಗಾರಿಕಾ ವಿಭಾಗದಿಂದಲೂ ಇನ್ನುಳಿದ 500 ಕುಟುಂಬಗಳನ್ನು ಸೇವಾ ವಿಭಾಗದಿಂದಲೂ ಪ್ರಯೋಜನ ಪಡೆಯುವಂತೆ ಆರಿಸಲಾಯಿತು. ಪ್ರಥಮ ಬಾರಿಗೆ 2ನೆಯ ಮತ್ತು 3ನೆಯ ವಿಭಾಗದಲ್ಲಿ (ಕೈಗಾರಿಕೆ, ಸೇವೆ ಮತ್ತು ಉದ್ದಿಮೆ)ಗ್ರಾಮೀಣ ಬಡ ಜನತೆಯನ್ನು ತೊಡಗಿಸಿ ಹೆಚ್ಚಿನ ಲಾಭ ಬರುವಂತೆ ಮಾಡು ವುದಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಯಿತು. ಕೈಗಾರಿಕಾ ವಿಭಾಗದಿಂದ ಪ್ರಯೋಜನ ಪಡೆಯಲಿರುವ 500 ಕುಟುಂಬಗಳ ಪೈಕಿ 250 ಕುಟುಂಬಗಳಿಗೆ ಖಾದಿ ಹಾಗೂ ಗ್ರಾಮೋದ್ಯೋಗ ಸಂಸ್ಥೆಯಿಂದ ಸಹಾಯ ದೊರಕಿಸಲಾಯಿತು. ಹೀಗೆ ಪ್ರತಿ ಬ್ಲಾಕಿನಲ್ಲಿ ಪ್ರತಿ ವರ್ಷವೂ 600 ಕುಟುಂಬಗಳನ್ನಾರಿಸುವಾಗ ಶೇಕಡ 30ರಷ್ಟು ಭಾಗ ವನ್ನು ಹರಿಜನ ಗಿರಿಜನರಿಗಾಗಿಯೇ ಮೀಸಲಿಡಲಾಗಿತ್ತು.

ಈ ಯೋಜನೆಗೆ ಬೇಕಾದ ಹಣದಲ್ಲಿ ಸುಮಾರು ರೂ. 1,500 ಕೋಟಿಯನ್ನು ಸಹಾಯಧನದ [ರೂ. 750 ಕೋಟಿ ಕೇಂದ್ರ

ಸರ್ಕಾರ ; ರೂ. 750 ಕೋಟಿ ರಾಜ್ಯ ಸರ್ಕಾರ] ರೂಪದಲ್ಲೂ ಸುಮಾರು ರೂ. 3,000 ಕೋಟಿಯನ್ನು ಬ್ಯಾಂಕ್‌ಗಳ ಸಾಲದ ರೂಪದಲ್ಲೂ ಒದಗಿಸುವುದೆಂದು ತಿಳಿಸಲಾಗಿತ್ತು. ತಜ್ಞರ ಆಯೋಗದ ಶಿಫಾರಸಿನಂತೆ ಸುಮಾರು ರೂ. 7,000ದಿಂದ ರೂ. 9,000 ತನಕ ಬಂಡವಾಳ ಹೂಡಿಕೆ ಒಂದು ಕುಟುಂಬದ ಆದಾಯವನ್ನು ಹೆಚ್ಚಿಸಬಹುದು. ಸಹಾಯ ಧನದ ಮಿತಿ ರೂ. 3,000 ವರೆಗೆ [ಕೊಡಲ್ಪಡುವ ಆಸ್ತಿಯ 25%ದಿಂದ $33\frac{1}{3}$% ಯೋಗ್ಯತೆಗನುಸಾರವಾಗಿ] ಮಾತ್ರ ಇರುವುದರಿಂದ, ಅದರಿಂದಲೇ ಹೆಚ್ಚಿನ ಆದಾಯ ತರಬಲ್ಲ ಯೋಜನೆ ಕೈಗೊಳ್ಳಲು ಸಾಧ್ಯವಿಲ್ಲದಿರುವುದರಿಂದ ಉಳಿದ ಭಾಗವನ್ನು ಬ್ಯಾಂಕಿನ ಸಾಲದ ಮೂಲಕ ದೊರಕಿಸಿಕೊಡಲಾಯಿತು. ಕೆಲವು ಅಂಕಿ-ಅಂಶಗಳ ಪ್ರಕಾರ 1980–81ರಲ್ಲಿ 27.9 ಲಕ್ಷ ಕುಟುಂಬಗಳು ಈ ಯೋಜನೆಯ ಪ್ರಯೋಜನ ಪಡೆದರೆ 1981–82ರಲ್ಲಿ 28.3 ಲಕ್ಷ ಕುಟುಂಬಗಳು ಇದರ ಪ್ರಯೋಜನ ಪಡೆದುವು. ಇದರಲ್ಲಿ 7 ಲಕ್ಷ ಹರಿಜನ ಗಿರಿಜನ ಕುಟುಂಬಗಳು 1980–81ರಲ್ಲಿ ಸೇರಿದ್ದರೆ, 10 ಲಕ್ಷ ಕುಟುಂಬಗಳು 1981–82ರಲ್ಲಿ ಸೇರಿದ್ದುವು. ಅಂದರೆ 1981–82ರಲ್ಲಿ ಶೇಕಡ 24.9 ಹರಿಜನ ಗಿರಿಜನ ಫಲಾನುಭವಿಗಳಿದ್ದರೆ 1981–82ರಲ್ಲಿ ಅದು ಶೇಕಡ 35.1ಕ್ಕೇರಿದೆ. ಕೇಂದ್ರ ಸರ್ಕಾರ 1980–81ರಲ್ಲಿ ರೂ. 82.58 ಕೋಟಿ ಕೊಟ್ಟರೆ, 1981–82ರಲ್ಲಿ ರೂ. 128.46 ಕೋಟಿ ಕೊಟ್ಟಿದೆ. ಹಾಗೆಯೇ ರಾಜ್ಯ ಸರ್ಕಾರಗಳು 1980–81ರಲ್ಲಿ ರೂ. 153.9 ಕೋಟಿ ನೀಡಿದ್ದರೆ, 1981–82ರಲ್ಲಿ ರೂ. 255.8 ಕೋಟಿ ನೀಡಿವೆ. ಅಂತೆಯೇ ಬ್ಯಾಂಕ್ ಸಾಲಗಳೂ ಗಮನಾರ್ಹವಾಗಿ ಹೆಚಿದ್ದು ಕಂಡುಬಂದಿದೆ. 1980–81ರಲ್ಲಿ ರೂ. 199 ಕೋಟಿ ಇದ್ದುದು 1981–82ರಲ್ಲಿ ರೂ. 470 ಕೋಟಿಗೆ ಏರಿದೆ. ಹಾಗೆಯೇ ತಲಾ ಸಹಾಯಧನವೂ 1980–81ರಲ್ಲಿ ರೂ. 550 ಇದ್ದುದು 1981–82ರಲ್ಲಿ ರೂ. 962ಕ್ಕೆ ಏರಿದೆ. ಅದೇ ರೀತಿ, 1980–81ರಲ್ಲಿ ತಲಾ ಹಣ ಹೂಡುವಿಕೆ ರೂ. 741 ಇದ್ದುದು 1981–82ರಲ್ಲಿ ರೂ. 1,766ಕ್ಕೇರಿದೆ. ಅಂತೆಯೇ ತಲಾ ಬಂಡವಾಳ ಹೂಡಿಕೆ [ಸಹಾಯ ಧನ-ಅವಧಿ ಸಾಲ] 1980–81ರಲ್ಲಿ ರೂ. 1,291 ಇದ್ದುದು, 1981–82ಕ್ಕೆ ರೂ. 2,728ಕ್ಕೇರಿದೆಯಲ್ಲದೆ, 110% ಹೆಚ್ಚುವರಿ ತೋರಿಸಿದೆ. ಸಹಾಯಧನ ಹಾಗೂ ಅವಧಿ ಸಾಲದ ಅನುಪಾತ 1980–81ರಲ್ಲಿ 1.35 ಇದ್ದುದು 1981–82ರಲ್ಲಿ 1.84 ಆಗಿದೆ. ಹಾಗೆಯೇ ಕೇಂದ್ರ ಸರ್ಕಾರ 1981–82ರಲ್ಲಿ ರೂ. 204.5 ಕೋಟಿಯನ್ನು ದೊರಕಿಸಿದ್ದು ಹಿಂದಿನ ವರ್ಷದ್ದಕ್ಕಿಂತ ಶೇ. 60 ಜಾಸ್ತಿಯಾಗಿದೆ. ಇದೆಲ್ಲವೂ ಫಲಾನುಭವಿಗಳು ಪಡೆದಿರುವ ಲಾಭದ ಏರುವಿಕೆಯ ದ್ಯೋತಕವಾಗಿದೆ.

## ವಿಮರ್ಶೆ

ಭಾರತದ ಬಡತನದ ಬಗೆಗಿನ ಅಧ್ಯಯನದಲ್ಲಿ ಅಗ್ರಗಣ್ಯರಾದ ಡಾ॥ ನೀಲಕಂಠ ರಥ್ ಅವರು ತಮ್ಮ ಟಿ. ಎ. ಪೈ ಸ್ಮಾರಕ ಭಾಷಣದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಬಗ್ಗೆ ತೌಲನಿಕ ವಿವರಣೆ ನೀಡಿದ್ದಾರೆ. ಅವರ ಪ್ರಕಾರ 6ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಲಾಭ ಪಡೆದ 1.6 ಕೋಟಿ ಫಲಾನುಭವಿಗಳಲ್ಲಿ ಶೇ. 10 ಮಂದಿಯೂ ದಾರಿದ್ರ್ಯ ರೇಖೆಯಿಂದ ಮೇಲಕ್ಕೆತ್ತಲ್ಪಡಲಿಲ್ಲ. ಆದರೆ ಕಾರ್ಯಕ್ರಮ ಮೌಲ್ಯನ ಸಂಸ್ಥೆ ತನ್ನ ವರದಿಯಲ್ಲಿ ಶೇ. 88 ಫಲಾನುಭವಿಗಳು ತಮ್ಮ ಸಂಪಾದನೆಯನ್ನು ಹೆಚ್ಚಿಸಿಕೊಂಡರೆಂದೂ ಶೇ. 64 ಜನ ಸಾಮಾಜಿಕ ಉನ್ನತಿ ಸಾಧಿಸಿಕೊಂಡರೆಂದೂ ತಿಳಿಸಿದೆ. ಒಟ್ಟು ಶೇ. 49.42 ಮಂದಿ ದಾರಿದ್ರ್ಯ ರೇಖೆಯಿಂದ [ಅಂದರೆ ರೂ. 3,500 ವಾರ್ಷಿಕ ಆದಾಯದಿಂದ] ಮೇಲ್ಬಂದರೆಂದೂ ತಿಳಿಸಿತು. ಅಂದರೆ ಈ ಕಾರ್ಯಕ್ರಮ ಕೆಲವು ಸಮಸ್ಯೆಗಳ ಹೊರತು ಬಡತನ ನಿವಾರಣೆಯ ನಿಟ್ಟಿನಲ್ಲಿ ಒಂದು ಒಳ್ಳೆಯ ಸಾಧನವಾಗಿದೆಯೆಂದು ಅಭಿಪ್ರಾಯಪಡಲಾಯಿತು. ಆದರೆ ಕಾರ್ಯಕ್ರಮ ಮೌಲ್ಯನ ಸಂಸ್ಥೆಯ ವರದಿಯ ಪ್ರಕಾರ ಶೇ. 37 ಫಲಾನುಭವಿಗಳು ತಮ್ಮ ಆಸ್ತಿಯನ್ನು ಹೆಚ್ಚಿಸಿಕೊಂಡರೆಂದು ತಿಳಿಸಿದಾಗ ಶೇ. 88 ಜನ ಹೇಗೆ ತಮ್ಮ ಆದಾಯ ಹೆಚ್ಚಿಸಿಕೊಂಡರೆಂಬುದು ಆಶ್ಚರ್ಯದ ಸಂಗತಿ. ಅಂದರೆ ಅಷ್ಟು ಜನ ಅವರಿಗಿತ್ತ ಆಸ್ತಿಗಳನ್ನು (ಕುರಿ, ಎಮ್ಮೆ, ಎತ್ತು, ಇತ್ಯಾದಿ) ಮಾರಿ ಹಣ ಪಡೆದರೆಂಬುದು ತಿಳಿದುಬರುತ್ತದೆ. ಹೀಗೆ ಕುಟುಂಬದ ಆದಾಯ ಹೆಚ್ಚಿಸಲು ಕೊಟ್ಟಿರುವ ಆಸ್ತಿಯನ್ನೇ ಮಾರಿದರೆಂದರೆ, ಅವರು ದಾರಿದ್ರ್ಯ ರೇಖೆಯಿಂದ ಮೇಲ್ಬಂದುದು ತಾತ್ಕಾಲಿಕವೇ ವಿನಾ ಬೇರೇನೂ ಅಲ್ಲ. ಕೆಲವು ವರದಿಗಳ ಪ್ರಕಾರ ಫಲಾನುಭವಿಗಳು ಪಡೆದ ಹಸುಗಳನ್ನು ಸಾಕಲು ಬೇಕಾದ ಬೈಹುಲ್ಲಿನ ಕೊರತೆ, ಪಶುವೈದ್ಯರ ಕೊರತೆ ಹಾಗೂ ದೊರೆತ ಹಾಲನ್ನು ಮಾರಲು ಬೇಕಾದ ಮಾರಾಟ ಕೇಂದ್ರದ ಕೊರತೆಗಳೇ ಹಸುಗಳನ್ನು ಮಾರುವಂತೆ ಮಾಡಿವೆ; ಅಥವಾ ಈ ಕೊರತೆಗಳಿಂದಾಗಿಯೇ ಅವು ಸಾವಿಗೆ ಈಡಾಗಿವೆ. ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ತಾನು ನೀಡಿದ ಸಣ್ಣ ನೀರಾವರಿಯ ಸಾಲದ ಬಗೆಗಿನ ಸಮೀಕ್ಷೆ ನಡೆಸಿದಾಗ ತಿಳಿದುಬಂದ ಅಂಶವೆಂದರೆ, ಶೇ. 50 ಮಂದಿ ಸಾಲಗಾರರು ಸಹಾಯ ಧನವನ್ನು ಪಡೆದುಕೊಂಡು, ಬಾವಿಯನ್ನು ತೋಡಲೇ ಇಲ್ಲ. ಜೈಪುರದ ಶ್ರೀ ಆಹುಜಾ ಅವರ ಅಧ್ಯಯನದ ಪ್ರಕಾರ (1984) ಶೇ. 45.7 ಫಲಾನುಭವಿಗಳಲ್ಲಿ ಮಾತ್ರ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಅಡಿಯಲ್ಲಿ ಕೊಡಲಾದ ಪ್ರಾಣಿಗಳು ಇದ್ದುವು; ಉಳಿದವನ್ನು ಮಾರಲಾಗಿತ್ತು ಅಥವಾ ಅವು ಸತ್ತಿದ್ದುವು (ಅಂದರೆ, ಪ್ರಾಣಿಗಳನ್ನು ಬೈಹುಲ್ಲು, ನೀರಿಲ್ಲದ ಪ್ರದೇಶಗಳಲ್ಲಿ ಸಾಕುವ ಬದಲು, ಸಾಯಲು ಬಿಟ್ಟು ವಿಮೆಯ ಹಕ್ಕು ಸಾಧಿಸಿ ಹಣ ಪಡೆಯುವುದು ಲಾಭದಾಯಕ) ಅಂತೆಯೇ ಕುರಿಗಳ ಸಾವಿನ ಪ್ರಮಾಣ ವರ್ಷಕ್ಕೆ 42% ಇದ್ದರೆ, ಒಂಟೆಗಾಡಿ ಯಜಮಾನರಲ್ಲಿ ಶೇ. 48 ಮಂದಿ ತಮ್ಮ ಒಂಟೆ ಗಾಡಿಗಳನ್ನು ಮಾರಿದ್ದರು. ಹಾಗೆಯೇ ದೆಹಲಿಯ ಅರ್ಥಶಾಸ್ತ್ರ ಶಾಲೆಯ ಪ್ರಾಚಾರ್ಯ ಕೆ. ಸುಬ್ಬಾರಾವ್ ಅವರ ಪ್ರಕಾರ, ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಕೊಡಲಾದ ಆಸ್ತಿಯನ್ನು ಮಾರಿ ಹೆಚ್ಚುವರಿ ಸಾಧಿಸಲಾಗಿದೆಯೇ ಹೊರತು, ದಾರಿದ್ರ್ಯ ರೇಖೆಯಿಂದ ಮೇಲೆ ಬಂದ ಮಂದಿ ಬಹಳ ಸ್ವಲ್ಪ. ಅವರ ಪ್ರಕಾರ 1982–83ರಲ್ಲಿ ಬರಗಾಲವಿದ್ದು ಆ ವರ್ಷ ಸಮೀಕ್ಷೆ ನಡೆಸಿದಾಗ, ತಮಗೆ ಸಾಕಲಾಗದ ಪ್ರಾಣಿಗಳನ್ನು ಫಲಾನುಭವಿಗಳು ಮಾರಿರುವ ಸಾಧ್ಯತೆಯ ಬಗ್ಗೆ ತಿಳಿಸಿದ್ದಾರೆ. ಯಾವುದೇ ಕುಟುಂಬ ತನ್ನ ವಾರ್ಷಿಕ ಉತ್ಪನ್ನವಾದ ರೂ. 3,000ನ್ನು ದಾಟಿ ರೂ.3,500ಕ್ಕಿಂತಲೂ ಮೇಲೇರಲು ಸಾಧ್ಯತೆಗಳಿವೆ. ಆದರೆ, ರೂ. 1.000 ವಾರ್ಷಿಕ ಉತ್ಪನ್ನವಿರುವ ಕುಟುಂಬ ರೂ. 3,500 ದಾಟುವುದು ಅಷ್ಟು ಸುಲಭದ ಮಾತಲ್ಲ. ಅಂದರೆ ಶೇ. 250 ಉತ್ಪನ್ನ ಮಾಡುವುದು ಕಷ್ಟಸಾಧ್ಯವೆಂದು ಹೇಳುತ್ತಾರೆ. ಒಂದು ಹಸುವಿನಿಂದ ಬರುವ ಉತ್ಪನ್ನ ಒಂದು ಕುಟುಂಬದ ಉತ್ಪತ್ತಿಯನ್ನು ಜಾಸ್ತಿ ಮಾಡಬಹುದು, ಆದರೆ, ಅದೇ ಒಂದು ಹಸುವಿನ ಉತ್ಪತ್ತಿ ದಾರಿದ್ರ್ಯ ರೇಖೆಯಿಂದ ಆ ಕುಟುಂಬವನ್ನು ಮೇಲೆತ್ತುವುದು

ಅಸಾಧ್ಯದ ಮಾತು. ಹಣಕಾಸು ನಿರ್ವಹಣೆ ಸಂಸ್ಥೆ ನಡೆಸಿದ ಅಧ್ಯಯನದ ಪ್ರಕಾರ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಫಲಾನುಭವಿಗಳಲ್ಲದವರೂ ರೂ. 1,500ಕ್ಕಿಂತ ಕಡಿಮೆ ವಾರ್ಷಿಕ ಉತ್ಪನ್ನವಿದ್ದಂಥವರೂ ಬೇರೆಬೇರೆ ಜಿಲ್ಲೆಗಳಲ್ಲಿ, ಶೇ. 30ರಿಂದ ಶೇ. 66.7ರ ತನಕ, ತಮ್ಮ ಆದಾಯವನ್ನುರೂ. 1,500ಕ್ಕಿಂತ ಮೇಲ್ಪಟ್ಟು ಹೆಚ್ಚಿಸಿಕೊಂಡಿದ್ದಾರೆ. ಆಶ್ಚರ್ಯಕರ ಸಂಗತಿ ಎಂದರೆ, ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಲಾಭ ಪಡೆದವರಿಗಿಂತ ಅದರ ಲಾಭ ಪಡೆಯದ ಮಂದಿಯೇ ತಮ್ಮ ಆದಾಯ ಹೆಚ್ಚಿಸಲು ಸಮರ್ಥರಾಗಿದ್ದಾರೆ. ಇದರಿಂದ ತಿಳಿದುಬರುವ ಅಂಶವೆಂದರೆ, ಕಾರ್ಯಕ್ರಮ ಮೌಲ್ಯನ ಸಂಸ್ಥೆಯ ವರದಿಯಂತೆ ಶೇ. 88 ಫಲಾನುಭವಿಗಳು ತಮ್ಮ ಆದಾಯಗಳನ್ನು ಹೆಚ್ಚಿಸಿಕೊಂಡರೆಂಬುದರ ಬದಲು ಶೇ. 50 ಜನ ಬೇರೆಯೇ ವಿಧಾನಗಳಿಂದ ತಮ್ಮ ಉತ್ಪತ್ತಿ ಹೆಚ್ಚಿಸಿಕೊಂಡರೆಂಬುದು ತಿಳಿದುಬರುವ ಸಂಗತಿ. ರಾಷ್ಟ್ರೀಯ ಸ್ಯಾಂಪಲ್ ಸರ್ವೇಕ್ಷಣಾ ಇಲಾಖೆಯ ವರದಿಯ ಪ್ರಕಾರ, 1977–78ರಿಂದ 1983ರ ವರೆಗೆ ಹಳ್ಳಿಯ ಬಡತನ ಶೇ. 11ರಷ್ಟು ಕಡಿಮೆಯಾಗಿದೆ. ಆದರೆ, 1966–67ರಿಂದ 1977–78ರ ವರೆಗೆ ಗ್ರಾಮೀಣ ಜನತೆಯ ಬಡತನ 17%ರಷ್ಟು ಕಡಿಮೆಯಾಗಿದೆಯೆಂದು ಡಾ॥ ಮಾಂಟೆಕ್ ಎಸ್. ಆಹ್ಲುವಾಲಿಯ ಅವರ ಸಮೀಕ್ಷೆ ತಿಳಿಸುತ್ತದೆ. ಆಗ ಬಡತನ ನಿವಾರಣಾ ಕಾರ್ಯಕ್ರಮಗಳು ಜಾರಿಯಲ್ಲಿರಲಿಲ್ಲ. ಆದ್ದರಿಂದ, ಈ 1977–78ರಿಂದ ಅನಂತರ ಆದ ಬದಲಾವಣೆ 'ಹಸಿರು ಕ್ರಾಂತಿ'ಯಿಂದ ಆದ ಬದಲಾವಣೆಯೇ ಹೊರತು ಬೇರೇನೂ ಅಲ್ಲ. ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದಿಂದಾದ ಬದಲಾವಣೆ ಅತ್ಯಲ್ಪವೆಂದೇ ಕಾಣುತ್ತದೆ.

### ಏಳನೆಯ ಪಂಚವಾರ್ಷಿಕ ಯೋಜನೆ

ಸರ್ಕಾರ ತನ್ನ 7ನೆಯ ಪಂಚವಾರ್ಷಿಕ ಯೋಜನೆಯಲ್ಲಿ, ಈಗಿರುವ ರೂ. 3,000 ವರೆಗಿನ ಸಹಾಯ ಧನದ ಮಿತಿಯನ್ನುರೂ. 6,000ಕ್ಕೆ ಏರಿಸಿ, ಗುಡ್ಡಗಾಡು ಜನಗಳಿಗೆ ಇದನ್ನು ರೂ. 8,000ಕ್ಕೆ ಏರಿಸುವುದಾಗಿ ಹೇಳಿದೆ.

ಪ್ರತಿಯೊಂದು ಅಧ್ಯಯನದಿಂದಲೂ ತಿಳಿದುಬರುವ ಅಂಶವೆಂದರೆ, ವ್ಯವಸಾಯವನ್ನವಲಂಬಿಸಿದ ಪ್ರದೇಶಗಳಲ್ಲಿ ಈ ಕಾರ್ಯಕ್ರಮ ಉತ್ತಮ ಫಲ ನೀಡಿದೆಯಲ್ಲದೆ, ಬಡವರ ಹಾಗೂ ಹಿಂದುಳಿದ ಜನರ ಪ್ರದೇಶಗಳಲ್ಲಿ ಅತಿ ಕಡಿಮೆ ಫಲ ನೀಡಿದೆ; ಅಥವಾ ನಿಷ್ಪ್ರಯೋಜಕವಾಗಿದೆ. ಕೆಲವರ ಅಭಿಪ್ರಾಯದಂತೆ, ಹಿಂದುಳಿದ ಜನರು, ಸಮಾಜದಲ್ಲಿ ತಲೆ ಎತ್ತಿ ಬಾಳಲೂ ಅಸಮರ್ಥರಾದವರು, ಈ ಕಾರ್ಯಕ್ರಮದಿಂದ ದೊರಕಿದ ಆಸ್ತಿಯನ್ನು ಹೊಂದಿ ಲಾಭದಾಯಕವಾಗಿ ಬಳಸಿ ಉಳಿದ ವರ್ಗಗಳ ಮುಂದೆ ಉತ್ತಮ ವಹಿವಾಟು ನಡೆಸಲು ಸಮರ್ಥರಾಗುವರೆಂಬುದು ಪ್ರಶ್ನೆಯಾಗಿಯೇ ಉಳಿದಿದೆ.

### ಸರಿಯಾದ ಜಾರಿಗೆ ಕೆಲವು ಸಲಹೆಗಳು

ಕಾರ್ಯಕ್ರಮ ಸರಿಯಾಗಿ ಜಾರಿಗೆ ಬರಲು ಕ್ರಮಬದ್ಧವಾದ ಯೋಜನಾಬದ್ಧವಾದ ಹಾಗೂ ವೈಜ್ಞಾನಿಕವಾದ ವ್ಯವಸ್ಥೆಯನ್ನು ರೂಪಿಸುವುದು ಅತ್ಯಗತ್ಯ. ಅದಕ್ಕಾಗಿ ಗ್ರಾಮೀಣ ಪ್ರದೇಶದಲ್ಲಿ ದುಡ್ಡಿನಾಸೆಗೆಆಸ್ತಿಮಾರದೆ ಕಾಪಾಡಿಕೊಂಡು ಬರಬೇಕು. ರಾಜಕೀಯ ಉದ್ದೇಶಗಳಿಗೆ ಸಾಲ-ಮೇಳಗಳನ್ನು ನಡೆಸುವಂತೆ ಆಸ್ತಿ ಸಂರಕ್ಷಣ ಹಾಗೂ ಸಾಲ ಮರುಪಾವತಿ ಮೇಳಗಳನ್ನೂ ನಡೆಸಿದರೆ, ಉಳಿದ ವೈಜ್ಞಾನಿಕ ಸಮೀಕ್ಷೆ ನಡೆಸಿ, ಬಡವರಲ್ಲಿ ಕಡುಬಡವರ ಕ್ರಮಬದ್ಧವಾದ ದಾಖಲೆಗಳ ನಿರ್ಮಾಣವಾಗಬೇಕು. ಅದರ ಆಧಾರದ ಮೇಲೆಯೇ ಪ್ರತಿ ಕುಟುಂಬವನ್ನು ಆರಿಸಿ ಕಾರ್ಯಕ್ರಮದ ಪ್ರಯೋಜನ ದೊರಕಿಸಬೇಕು. ಈ ಕೆಲಸ ರಾತ್ರಿ ಬೆಳಗಾಗುವುದರೊಳಗಾಗಿ ಮುಗಿಯುವ ಕೆಲಸವಲ್ಲ. ಇದು ಒಬ್ಬ ವ್ಯಕ್ತಿ, ಒಂದು ಸಂಸ್ಥೆ ಮಾಡಿ ಮುಗಿಸುವ ಕೆಲಸವಲ್ಲ. ಇದರಲ್ಲಿ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಅಭಿಕರಣ, ಬ್ಲಾಕ್ ಅಧಿಕಾರಿಗಳು ಹಾಗೂ ಬ್ಯಾಂಕುಗಳವರೆಲ್ಲರೂ ಸೇರಿ ಪ್ರತಿ ಹಂತದಲ್ಲೂ ಒಟ್ಟುಗೂಡಿ ಕೆಲಸ ಮಾಡಬೇಕು. ಜಿಲ್ಲಾ ಮಟ್ಟದ ಆಡಳಿತ ಯಂತ್ರದಲ್ಲಿ, ಅನುಭವ ಅರ್ಹತೆಯುಳ್ಳ ಹಾಗೂ ತರಬೇತಿ ಹೊಂದಿದ ಅಧಿಕಾರಿಗಳಿರಬೇಕು. ಯೋಗ್ಯರಾದ ಫಲಾನುಭವಿಗಳನ್ನು ಆರಿಸಲು ಸರಿಯಾದ ತಜ್ಞರು ಬೇಕಲ್ಲದೆ, ಫಲಾನುಭವಿ ಕುಟುಂಬದ ಆಸ್ತಿ, ಹೊಣೆಗಾರಿಕೆ, ಉದರಿ ಅರ್ಹತೆ ಮತ್ತು ನೈಪುಣ್ಯವನ್ನು ಗಮನಿಸಿ ಆರಿಸುವುದಗತ್ಯ. ಇದರಿಂದ ಶ್ರೀಮಂತ ಅನರ್ಹ ಕುಟುಂಬಗಳು ಲಾಭ ಪಡೆಯುವುದನ್ನು ತಪ್ಪಿಸಬಹುದು. ಬೇರೆಬೇರೆ ಸಂಸ್ಥೆಗಳಲ್ಲಿ [ಸಹಕಾರಿ ಸಂಘಗಳು, ಸ್ಥಳೀಯ ಗ್ರಾಮೀಣ ಬ್ಯಾಂಕುಗಳು, ಬ್ಯಾಂಕುಗಳು] ಬೇರೆಬೇರೆಯಾದ ಆಧಾರ ಪತ್ರಗಳು, ಬಡ್ಡಿ ದರಗಳು, ಮರುಪಾವತಿಯ ಕಾಲ, ಬಟವಾಡೆಯ ಕಂತು ಇರುವುದರಿಂದ ಫಲಾನುಭವಿಗಳಲ್ಲಿ ತಾರತಮ್ಯ ಒರುವ ಸಾಧ್ಯತೆಗಳಿವೆ. ಆದ್ದರಿಂದ ಅಂಥ ತಾರತಮ್ಯಗಳನ್ನು ತೊಡೆದುಹಾಕುವುದು ಅಗತ್ಯ.

ಕಾರ್ಯಕ್ರಮದ ಜಾರಿಯಲ್ಲಿ ತುರ್ತಾಗಿ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳಬೇಕು. ಅವೆಂದರೆ, ಸರ್ಕಾರ ತನ್ನ ಗುರಿ ಸಾಧಿಸುವುದೊಂದೇ ಉದ್ದೇಶವೆಂದು ತಿಳಿದು ಅತಿ ಹೆಚ್ಚು ಮಂದಿ ಫಲಾನುಭವಿಗಳಿಗೆ ಲಾಭ ದೊರಕಿಸಿ ಕೊಡಲು ಮುಂದಾದರೆ, ಆರನೆಯ ಪಂಚವಾರ್ಷಿಕ ಯೋಜನೆಯಲ್ಲಾದಂತೆ, ಅತ್ಯಮೂಲ್ಯವಾದ ಸಹಾಯ ಧನ [ತೆರಿಗೆದಾರರ ಹಣ] ಹಾಗೂ ಸಾಲದ ಹಣ [ಠೇವಣಿದಾರರ ಹಣ] ನಿರರ್ಥಕವಾಗಿ ಪೋಲಾಗುವ ಸಾಧ್ಯತೆಗಳಿವೆ. ಅದರ ಬದಲಾಗಿ ಸಾಧ್ಯವಿದ್ದಷ್ಟು ಕಡಿಮೆ ಫಲಾನುಭವಿಗಳನ್ನು, ಅತ್ಯಂತ ಹಿಂದುಳಿದ ಪ್ರದೇಶಗಳಿಂದ, ಕಡುಬಡತನದಲ್ಲಿರುವವರನ್ನು ಆರಿಸಿ ಸಹಾಯ ದೊರಕಿಸಿ ಅವರ ಬಗ್ಗೆಯೇ ಹೆಚ್ಚು ಗಮನವಿರಿಸಿ, ಅವರು ದಾರಿದ್ರ್ಯ ರೇಖೆಯಿಂದ ಮೇಲ್ಬಂದರೆಂಬುದನ್ನು ಖಚಿತಪಡಿಸಿಕೊಳ್ಳಬೇಕು. ಫಲಾನುಭವಿಗಳಿಗೆ ದೊರಕಿಸುವ ಆಸ್ತಿಗೆ (ಹಸು, ಎತ್ತು, ಕುರಿ ಇತ್ಯಾದಿ) ಬೇಕಾದ ಬೈಹುಲ್ಲು, ಪಶುವೈದ್ಯರ ವ್ಯವಸ್ಥೆ, ಹಾಗೂ ಹಾಲು ಮಾರುವವರಿಗೆ ಮಾರಾಟ ಕೇಂದ್ರದ ಸೌಲಭ್ಯ ದೊರಕಿಸಿ ಕೊಡಬೇಕು. ಕೆಲವು ಸಂದರ್ಭಗಳಲ್ಲಿ ಕೆಲವು ಫಲಾನುಭವಿಗಳಿಗೆ ಇಮ್ಮಡಿ ಸಾಲ ಹಾಗೂ ಧನಸಹಾಯ ಮಾಡಬೇಕಾಗುತ್ತದೆ. ಇವೆಲ್ಲಕ್ಕಿಂತ ಮಿಗಿಲಾಗಿ ಸರ್ಕಾರಿ ಯಂತ್ರ (ಅಧಿಕಾರಿ ವರ್ಗ) ಫಲಾನುಭವಿಗಳ ಆಯ್ಕೆ ಹಾಗೂ ಸಾಲ ದೊರಕಿಸುವ ತನಕದ ಜವಾಬ್ದಾರಿ ಮಾತ್ರ ತಮ್ಮದೆಂದು ತಿಳಿಯದೆ ಫಲಾನುಭವಿಗಳು ಕಾರ್ಯಕ್ರಮದ ಪೂರ್ಣ ಲಾಭ ಪಡೆದರೇ ಇಲ್ಲವೇ ಎಂಬುದನ್ನು ಬ್ಯಾಂಕಿನವರ ಜೊತೆ ಸೇರಿ ಮೇಲ್ವಿಚಾರಣೆ ನಡೆಸಿದರೆ ಒಳ್ಳೆಯದು. ಫಲಾನುಭವಿಗಳೂ ಸದಾ ಎಚ್ಚರವಿದ್ದು ತಮಗೆ ದೊರಕಿಸಿದ ಆಸ್ತಿಯನ್ನು ಉಳಿಸಿಕೊಳ್ಳಬೇಕು. ಕೊನೆಯದಾಗಿ ಪ್ರತಿಯೊಬ್ಬನೂ ತನ್ನ ಜವಾಬ್ದಾರಿಯನ್ನರಿತು ಕಾರ್ಯಕ್ರಮದ ಲಾಭ ಪಡೆದು, ತನ್ನೊಡನೆ ತನ್ನ ದೇಶದ ನೈಜ ಅಭಿವೃದ್ಧಿಗೂ ಕಾರಣವಾಗುವುದು ಅತ್ಯಂತ ಅಗತ್ಯ. ●

# ಅಭಿವೃದ್ಧಿಶೀಲ ದೇಶಗಳಲ್ಲಿ ಹಣಕಾಸು ಸಂರಚನೆಯ ಸುಧಾರಣೆ

ಮೂಲ : ವಿ. ವಿ. ಭಟ್

ಅನುವಾದ : ಹಲವರು

**ಗೃಹ ಉಳಿತಾಯಗಳ ಬಹುಭಾಗ ಬರುವುದು ಗೃಹ ಘಟಕಗಳು ಮತ್ತು ಸಣ್ಣ ಉದ್ಯಮಗಳಿಂದ. ಅವುಗಳ ಉಳಿತಾಯಗಳನ್ನು ಹೆಚ್ಚು ಉತ್ಪಾದಕವಾಗಿ ಉಪಯೋಗಿಸಲು ಅಗತ್ಯವಾದ ಹಣಕಾಸು ಸಂಲೇಖಗಳು ಮತ್ತು ಸಾಂಸ್ಥಿಕ ಬದಲಾವಣೆಗಳ ವಿವೇಚನೆ ಇಲ್ಲಿದೆ.**

ಹೆಚ್ಚುವರಿಯ ಹಣಕಾಸೇತರ ಘಟಕಗಳಿಗೆ ಮತ್ತು ಕಡಿಮೆ ಸಾಮಾಜಿಕ ಪ್ರತಿಫಲಗಳನ್ನು ನೀಡುವ ಕಲಾಪಗಳಿಂದ ಹೆಚ್ಚಿನ ಸಾಮಾಜಿಕ ಪ್ರತಿಫಲಗಳನ್ನು ನೀಡುವ ಕಲಾಪಗಳೆಡೆಗೆ-ಹಣಕಾಸು ಸಂಪನ್ಮೂಲಗಳನ್ನು ದಕ್ಷವಾದ ರೀತಿಯಲ್ಲಿ ಚಾಲನೆಗೊಳಿಸುವುದು ಸ್ವಸ್ಥ ಹಣಕಾಸು ಸಂರಚನೆಯ ಕಾರ್ಯಭಾರವಾಗಿರುತ್ತದೆ. ನಿಧಿಗಳ ಈ ಬಗೆಯ ಚಾಲನೆಗೆ ಯಥೋಚಿತ ಸಂಸ್ಥೆಗಳು ಹಾಗೂ ಸಾಂಸ್ಥಿಕ ದರ್ಶನವೂ ಉಳಿತಾಯದಾರರ ಮತ್ತು ಸಾಲಗಾರರ ಒಲವು ಮತ್ತು ಅಗತ್ಯಗಳಿಗೆ ಅನುಗುಣವಾಗಿರುವ ಇತ್ಯಾತ್ಮಕವಾಗಿರುವ ನೈಜ ಬಡ್ಡಿ ದರಗಳ ತರ್ಕಬದ್ಧ ಸಂರಚನೆಯೂ ಅಗತ್ಯವಾಗಿರುತ್ತವೆ.

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಹಣಕಾಸು ಸಂರಚನೆಗೆ ಸಂಬಂಧಿಸಿದ ನವೀನ ಪ್ರಯೋಗಗಳಷ್ಟಾದರೂ ಮುಖ್ಯವಾಗಿರುತ್ತವೆ. ಇಂದಿನ ಅಭಿವೃದ್ಧಿಶೀಲ ದೇಶಗಳ ಹಣಕಾಸು ಸಂರಚನೆ ಯಾವ ದಿಕ್ಕಿನಲ್ಲಿ ವಿಕಾಸಗೊಳ್ಳಬೇಕು ಎಂಬುದು ಆಯಾ ದೇಶದ ಪರಿಸ್ಥಿತಿಗಳನ್ನು ಅವಲಂಬಿಸಿರುತ್ತದೆ. ಆದಾಗ್ಯೂ ಬಹುಶಃ ವ್ಯಾಪಕವಾಗಿ ಅನ್ವಯ ಯೋಗ್ಯವಾದ ಕೆಲವು ಸಾಮಾನ್ಯ ಮಾರ್ಗದರ್ಶಿ ಸೂತ್ರಗಳು ಅನುಭವದಿಂದ ವೇದ್ಯವಾಗುತ್ತವೆ.

ಉಳಿತಾಯ ವರ್ತನೆಯನ್ನು ವಿಶ್ಲೇಷಿಸುವಲ್ಲಿ ಅರ್ಥವ್ಯವಸ್ಥೆಯನ್ನು ಮೂರು ವಲಯಗಳಾಗಿ ವಿಂಗಡಿಸುವುದರಿಂದ ಪ್ರಯೋಜನವಿದೆ. ಸರ್ಕಾರಿ, ಕಂಪನಿ, ಕಂಪನೀತರ(ಕಂಪನೀತರ ಕೃಷಿ ಉದ್ಯಮಗಳು ಮತ್ತು ಕೃಷೀತರ ಉದ್ಯಮಗಳು ಹಾಗೂ ಶುದ್ಧ ಗೃಹವಲಯ) ಸರ್ಕಾರಿ ವಲಯದ ಉಳಿತಾಯಗಳನ್ನು ಒಂದು ನಿಶ್ಚಿತ ಮಟ್ಟಕ್ಕಿಂತ ಮೇಲಕ್ಕೇರಿಸಲು ಸಾಧ್ಯವಿಲ್ಲ. ತೆರಿಗೆ ಮತ್ತು ಇತರ ಚಾಲ್ತಿ ಹುಟ್ಟುವಳಿಗಳ ಏರಿಕೆಯಿಂದ ಶಿಕ್ಷಣ, ಆರೋಗ್ಯ ಮತ್ತು ಸಮಾಜ ಕಲ್ಯಾಣ ಇಂತಹ ಸಮಾಜ ಸೇವೆಗಳ ಮೇಲೆ ಸರ್ಕಾರದ ಚಾಲ್ತಿ ಅಭಿವೃದ್ಧಿ ಖರ್ಚುಗಳು ಏರುವ ಪ್ರವೃತ್ತಿ ತೋರುತ್ತವೆ. ಈ ಖರ್ಚುಗಳು ಅನೇಕ ವೇಳೆ ಭೌತಿಕ ಆಸ್ತಿಗಳ ಮೇಲಣ ವಿನಿಯೋಜನೆ ಎಷ್ಟರ ಮಟ್ಟಿಗಾದರೂ ಅಭಿವೃದ್ಧಿ ಪ್ರಕ್ರಿಯೆಗೆ ಮುಖ್ಯವಾಗಿರುತ್ತದೆ. ಸರ್ಕಾರಿ ಉಳಿತಾಯ, ಅಂದರೆ ಸರ್ಕಾರದ ಪ್ರಚಲಿತ ಖರ್ಚುಗಳಿಗಿಂತ ಹುಟ್ಟುವಳಿಗಳ ಹೆಚ್ಚಳ, ಇದು ಕೆಲವು ಅಭಿವೃದ್ಧಿಶೀಲ ದೇಶಗಳಲ್ಲಿ ಮಾತ್ರ ಅವುಗಳ ಸ್ಥೂಲ ದೇಶೀಯ ಉತ್ಪನ್ನದ ಶೇ. 2–3ಕ್ಕಿಂತ ಅಧಿಕವಾಗಿದೆ.

ಅತಿ ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಕಂಪನಿ ಉಳಿತಾಯ ಹೆಚ್ಚಾಗಿ ಇಲ್ಲ. ಈ ದೇಶಗಳಲ್ಲಿ ಕಂಪನಿ ವಲಯವೇ ಕಿರಿದು. ಆದರೂ ಅರ್ಥ ವ್ಯವಸ್ಥೆಯಲ್ಲಿ ಕಂಪನಿ ವಲಯವು ಹೆಚ್ಚಿನ ಪ್ರಮಾಣದಲ್ಲಿರುವ ಕೈಗಾರಿಕಾ ದೇಶಗಳಲ್ಲಿ ಕೂಡ ಖಾಸಗಿ ಕಂಪನಿ ಕ್ಷೇತ್ರದ ಉಳಿತಾಯ ಅದರ ಸ್ಥೂಲ ರಾಷ್ಟ್ರೀಯ ಉತ್ಪನ್ನದಲ್ಲಿ ಒಂದು ಸಣ್ಣ ಭಾಗವಾಗಿ ಮಾತ್ರ ಇರುತ್ತದೆ. ಉದಾಹರಣೆಗೆ 1960–69ರಲ್ಲಿ ಈ ಅನುಪಾತ ಜಪಾನಿನಲ್ಲಿ ಶೇ. 4.7ರಷ್ಟು, ಫ್ರಾನ್ಸ್‌ನಲ್ಲಿ ಶೇ. 3.9ರಷ್ಟು, ಜರ್ಮನ್ ಸಂಯುಕ್ತ ಗಣರಾಜ್ಯದಲ್ಲಿ ಶೇ. 2·3ರಷ್ಟು ಇತ್ತು.

ಮಧ್ಯಮ ಹಾಗೂ ಅಲ್ಪ ಆದಾಯವುಳ್ಳ ಅನೇಕ ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಕೈಗಾರಿಕಾ ದೇಶಗಳಲ್ಲಿರುವಂತೆ ನಿರ್ಣಾಯಕ ಮಹತ್ವ ಉಳ್ಳದ್ದೆಂದರೆ ಕಂಪನೀತರ ವಲಯದ ಉಳಿತಾಯವೇ. ಈ ವಲಯದ ಉಳಿತಾಯ ಸಾಮಾನ್ಯವಾಗಿ ಉಳಿತಾಯದ ಶೇ. 60-70ರಷ್ಟಾಗಿರುತ್ತದೆ. ವಿನಿಯೋಜನೆಗಿಂತ ಉಳಿತಾಯವೇ ಅಧಿಕವಾಗಿರುವ ವಲಯ ಇದೊಂದೇ, ಉಳಿತಾಯಕ್ಕಿಂತ ವಿನಿಯೋಜನೆಯೇ ಅಧಿಕವಾಗಿರುವ ಸರ್ಕಾರಿ ಮತ್ತು ಕಂಪನೀತರ ವಲಯಗಳ ಬೆಳವಣಿಗೆ ಈ ವಲಯದಿಂದ ಆಗುವ ಸಂಪನ್ಮೂಲಗಳ ವರ್ಗಾವಣೆಯನ್ನೇ ನಿರ್ಣಾಯಕವಾಗಿ ಅವಲಂಬಿಸಿರುತ್ತದೆ. ಈ ವಲಯದೊಳಗೆ ಹೆಚ್ಚುವರಿ ಸಾಧಿಸಿರುವ ಘಟಕವೆಂದರೆ, ತಕ್ಕಮಟ್ಟಿಗೆ ದೊಡ್ಡ ಉದ್ಯಮಗಳು (ಕೃಷಿ ಮತ್ತು ಕೃಷೀತರ) ಮತ್ತು ಶುದ್ಧ ಗೃಹ ಘಟಕಗಳು. ಬಡತನವನ್ನು ಕಡಿಮೆಮಾಡಲು ಹಾಗೂ ಅಭಿವೃದ್ಧಿಯನ್ನು ತ್ವರಿತಗೊಳಿಸಲು ಕಂಪನೀತರ ವಲಯದ ಉಳಿತಾಯವನ್ನು ಹೆಚ್ಚಿಸುವುದು ಮತ್ತು ಸಂಪನ್ಮೂಲ ವರ್ಗಾವಣೆಯ ದಕ್ಷ ವಿಧಾನಗಳಿಂದ ಅವುಗಳ ಹಂಚಿಕೆ ಮತ್ತು ಬಳಕೆಯನ್ನು ಸುಧಾರಿಸುವುದು ಅಗತ್ಯವಾಗಿರುತ್ತದೆ.

ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿನ ಕಂಪನೀತರ ವಲಯದ ಉಳಿತಾಯ ದರಗಳು ಕಳೆದ ಸುಮಾರು 15 ವರ್ಷಗಳಲ್ಲಿ ಗಮನಾರ್ಹವಾಗಿ ಏರಿವೆ. ಆದಾಗಿಯೂ ಹಣಕಾಸು ಸಂಸ್ಥೆಗಳು. ಸಂಲೇಖಗಳು ಮತ್ತು ಬಡ್ಡಿ ದರಗಳು—ಇವುಗಳಲ್ಲಿಯ ಸಂರಚನಾತ್ಮಕ ಕೊರತೆಗಳಿಂದಾಗಿ ಅನೇಕ ಕಡಿಮೆ ಅಭಿವೃದ್ಧಿ ಹೊಂದಿದ

---

ಅನುವಾದಕರು : ಮೈಸೂರು ಬ್ಯಾಂಕಿನ - ಅ. ಚ. ಅಶೋಕ ಕುಮಾರ್, ಶ್ರೀಧರ ರಾಯಸಂ, ಮಾಲತಿ ಅಲಂಕಳಿಯ, ಎಂ. ಶಿವಕುಮಾರಸ್ವಾಮಿ, ಎಂ. ಎಸ್. ಸೂರ್ಯನಾರಾಯಣರಾವ್, ಎಚ್. ವೆಂಕಟರಾವ್, ಎನ್. ಕೈಲಾಸ್, ಗೋಪಾಲಕೃಷ್ಣ ಉಪಾಧ್ಯ, ಎಂ. ಎನ್. ರಾಮಕೃಷ್ಣ, ಗಿರಿಧರ ಕಾರ್ಕಳ, ವಿ. ಆನಂದ, ಎಂ. ಎಸ್. ನರಸಿಂಹಮೂರ್ತಿ, ಭಾರತೀಯ ಸ್ಟೇಟ್ ಬ್ಯಾಂಕಿನ - ಪದ್ಮ ಕಲ್ಮಾಡಿ, ಟಿ. ಎಂ. ಎಸ್. ವಾಗೀಶ, ಬಿ. ಎಸ್. ಚಂದ್ರಶೇಖರ, ಆರ್. ನರಸಿಂಗರಾವ್, ಚಿತ್ರಶೇಖರ ಕಂಠಿ, ಬಿ. ನಾಗವೇಣಿ, ನೀ. ಕೃ. ಅನಂತಸ್ವಾಮಿ, ಚಿ. ರಾ. ವೇಣುಗೋಪಾಲ, ಕೆ. ಎಸ್. ಮಹಾಬಲ, ಜಿ. ಎನ್. ನರಸಿಂಹಮೂರ್ತಿ ಹಾಗೂ ಕರ್ನಾಟಕ ರಾಜ್ಯ ಸಹಕಾರಿ, ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ - ಡಿ. ಎಸ್. ಕೆಂಪೇಗೌಡ.

---

'Improving the Financial Structure in Developing Countries', V. V. Bhat, *Finance & Development*, June 1986

ದೇಶಗಳಲ್ಲಿ ಈ ವಲಯದ ಹಣಕಾಸು ಉಳಿತಾಯಗಳು ಅವು ಇರಬಹುದಾದುದಕ್ಕಿಂತ ಈಗಲೂ ಬಹು ಕಡಿಮೆ ಆಗಿವೆ.

ಹಣಕಾಸು ಸಂಲೇಖಗಳು

ಉಳಿತಾಯವನ್ನು ಹೆಚ್ಚಿಸಲು ಮತ್ತು ಆದರ ಹಂಚಿಕೆ ತರ್ಕಬದ್ಧವಾಗಿರುವಂತೆ ಖಾತರಿಪಡಿಸಿಕೊಳ್ಳಲು ಕಂಪನೀತರ ವಲಯದ ಉಳಿತಾಯದ ಒಲವುಗಳು ಹಾಗು ಪ್ರೇರಣೆಗಳಿಗೂ, ಖಚಿತವಾಗಿ ದೊರಕುವ ಹುಟ್ಟುವಳಿಗಳಿಗೂ ಹೊಂದಿಕೆಯಾಗುವಂತಹ ಹಣಕಾಸು ಸಂಲೇಖಗಳನ್ನು ರೂಪಿಸುವುದು ಅಗತ್ಯವಾಗುತ್ತದೆ. ಅಂಥ ಹಣಕಾಸು ಸಂಲೇಖಗಳ ಸ್ವರೂಪ ಮತ್ತು ಸಂರಚನೆ ಏನು ?

ಕಡಿಮೆ ಅಭಿವೃದ್ಧಿ ಹೊಂದಿದ ಕೆಲವು ದೇಶಗಳಲ್ಲಿಯ ಹಣಕಾಸು ಉಳಿತಾಯ ಕುರಿತ ಅಪೂರ್ಣ ದತ್ತಾಂಶಗಳಿಂದ ಗೊತ್ತಾಗುವುದು ಏನೆಂದರೆ, ಕಂಪನೀತರ ವಲಯ ತನ್ನ ಹಣಕಾಸು ಉಳಿತಾಯದಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗವನ್ನು ಉಳಿತಾಯ ಹಾಗು ಸ್ಥಿರ ಠೇವಣಿ ರೂಪದಲ್ಲಿ ಹೊಂದಿರಲು ಇಚ್ಛಿಸುತ್ತದೆ. ಜೀವವಿಮೆ, ಪಿಂಚಣಿ ಮತ್ತು ಭವಿಷ್ಯನಿಧಿ ಮತ್ತು ಇಂಥ ಸಾಮಾಜಿಕ ಭದ್ರತಾ ಸಂಸ್ಥೆಗಳ ಮೇಲಣ ಹಕ್ಕುಗಳು ಎರಡನೆಯ ಗಮನಾರ್ಹ ಆಸ್ತಿ ಎಂದು ತೋರುತ್ತದೆ. ಹೀಗೆ, ಹಣಕಾಸು ಉಳಿತಾಯಗಳ ಬಹುಭಾಗ ಹಣಕಾಸು ಸಂಸ್ಥೆಗಳ ಮೇಲಣ ಹಕ್ಕುಗಳ ರೂಪದಲ್ಲಿರುವಂತೆ ತೋರುತ್ತದೆ ; ಸರ್ಕಾರ ಕಂಪನಿ ವಲಯಗಳ ಮೇಲಣ ನೇರವಾದ ಹಕ್ಕುಗಳ ರೂಪದಲ್ಲಿರುವ ಉಳಿತಾಯಗಳು (ಸಾಮ್ಯ ಷೇರುಗಳು ಮತ್ತು ಬಾಂಡುಗಳು) ಕಂಪನೀತರ ವಲಯದ ಒಟ್ಟು ಹಣಕಾಸು ಉಳಿತಾಯದ ಶೇ 20ನ್ನು ಮೀರುವುದಿಲ್ಲ.

ಜಪಾನಿನ ಕಂಪನೀತರ ವಲಯ ಬೇರಾವುದೇ ಕೈಗಾರಿಕಾ ದೇಶದ ಕಂಪನೀತರ ವಲಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ತನ್ನ ವಿನಿಯೋಗಾರ್ಹ ವರಮಾನದಲ್ಲಿ ಉಳಿತಾಯಮಾಡುತ್ತದೆ (ಅಮೆರಿಕದಲ್ಲಿ ಇದು ಶೇ. 7 ; ಆದರೆ ಜಪಾನಿನಲ್ಲಿ ಇದು ಶೇ. 21) ಜಪಾನಿನ ಕಂಪನೀತರ ವಲಯದ ಉಳಿತಾಯದಲ್ಲಿ ಶೇ. 60ಕ್ಕಿಂತ ಹೆಚ್ಚಿನ ಭಾಗ ನಿವ್ವಳ ಹಣಕಾಸು ಆಸ್ತಿಗಳ ಸ್ವರೂಪದಲ್ಲಿರುತ್ತದೆ. ಜಪಾನಿನಲ್ಲಿಯ ಕಂಪನೀತರ ವಲಯದ ಉಳಿತಾಯದ ಈ ಹೆಚ್ಚಿನ ಪ್ರಮಾಣಕ್ಕೆ ಅಲ್ಲಿಯ ಹಣಕಾಸು ಸಂಸ್ಥೆಗಳ ಸ್ವರೂಪ ಹಾಗೂ ನೀತಿಗಳು ಮುಖ್ಯ ಕಾರಣ ಎಂಬುದು ಅಭಿವೃದ್ಧಿಶೀಲ ದೇಶಗಳಿಗೆ ಬೋಧಪ್ರದವಾಗಿದೆ. ಆ ದೇಶದಲ್ಲಿ ಸುಮಾರು 10,600 ಜನಕ್ಕೆ ಒಂದು ಬ್ಯಾಂಕ್ ಕಛೇರಿ ಇದೆ. ಉದರಿ ಸಂಘ ಮತ್ತು ಉದರಿ ಸಹಕಾರಿ ಸಂಸ್ಥೆಗಳ ಸುಮಾರು ಏಳು ಸಾವಿರ ಕಛೇರಿಗಳು, ಸರಿಸುಮಾರು ಅಷ್ಟೇ ಸಂಖ್ಯೆಯ ಕಾರ್ಮಿಕ, ಕೃಷಿ ಮತ್ತು ಮೀನುಗಾರಿಕೆ ಸಹಕಾರಿ ಸಂಸ್ಥೆಗಳು ಮತ್ತು ಅಂಚೆ ಉಳಿತಾಯ ವ್ಯವಸ್ಥೆಯ 22,000 ಕಚೇರಿಗಳು ಅಲ್ಲಿವೆ. ನೈಜ ಬಡ್ಡಿ ದರಗಳು ಕಡಿಮೆ ಇದ್ದರೂ (ಉದಾ : ಒಂದು ವರ್ಷದ ಬ್ಯಾಂಕ್ ಠೇವಣಿಗೆ ಶೇ. 3) ಅವನ್ನು ನಿಶ್ಚಯಾತ್ಮಕವಾಗಿ ನೆಲೆಗೊಳಿಸಲಾಗಿದೆ. ಮೇಲ್ವಿಚಾರಣೆ, ಠೇವಣಿ ವಿಮೆ ಮತ್ತು ಠೇವಣಿ ದರಗಳ ಮೇಲೆ ಗರಿಷ್ಠ ಮಿತಿಗಳ ವಿಧಿಸುವಿಕೆ—ಎಂದರೆ ದರ ನಿಗದೀಕರಣ—ಇವುಗಳ ಮೂಲಕ ಬ್ಯಾಂಕಿಂಗ್ ವ್ಯವಸ್ಥೆಯನ್ನು ಭದ್ರವಾಗಿಡಲು ಸರ್ಕಾರಿ ನೀತಿಗಳು ರೂಪಿತವಾಗಿವೆ.

ಸರಳವಾದ, ಅನುಕೂಲಕರವಾದ ಮತ್ತು ಸುಲಭವಾಗಿ ಗ್ರಹಿಸಬಹುದಾದ ವಹಿವಾಟಿನ ವೆಚ್ಚ ಅಧಿಕವಾಗಿರದ ಮತ್ತು ಸುಲಭವಾಗಿ ಹಾಗು ನಷ್ಟವಿಲ್ಲದೆ ಹಣರೂಪಕ್ಕೆ ಪರಿವರ್ತಿಸಬಹುದಾದ ಹಣಕಾಸು ಸಂಲೇಖಗಳನ್ನು ಅಭಿವೃದ್ಧಿಶೀಲ ದೇಶಗಳಲ್ಲಿನ ಕಂಪನೀತರ ಉಳಿತಾಯಗಾರರು ಆಯ್ಕೆಮಾಡಿಕೊಳ್ಳುವ ಸಂಭವವಿದೆ. ಅವಧಿಗಳ ಹಾಗೂ ಬಡ್ಡಿ ತರುವ ಠೇವಣಿಗಳಿಗೆ ಈ ಲಕ್ಷಣಗಳು ಇವೆ. ಆದಾಗ್ಯೂ ಇವು ಉಳಿತಾಯಗಾರರಿಗೆ ಆಕರ್ಷಕವಾಗಿರಬೇಕಾದರೆ ಇವನ್ನು ಉಳಿತಾಯದ ಮೂಲ ಪ್ರೇರಣೆಗಳಿಗೆ ಹೊಂದಿಸಬೇಕಾದ್ದು ಅವಶ್ಯ.

ಉಳಿತಾಯದ ಮೂಲಪ್ರೇರಣೆಗಳಲ್ಲಿ ಒಂದೆಂದರೆ ಉಳಿತಾಯದಾರ ತನ್ನದೇ ಆದ ಒಂದು ಮನೆ ಮಾಡಿಕೊಳ್ಳುವುದು. ಮನೆಯ ಮೌಲ್ಯಕ್ಕಾಗಿ ಒಂದು ನಿಶ್ಚಿತ ಮೊಬಲಗನ್ನು (ಉದಾ : ಶೇ. 25) ಯಾರು ಉಳಿಸಿರುತ್ತಾರೋ ಅಂಥವರಿಗೆ ಮನೆಗಳನ್ನು ಕಟ್ಟಲು ಅಥವಾ ಕೊಳ್ಳಲು ಸಾಲನೀಡುವುದು ಸಾಧ್ಯವಾಗುವಂತೆ ಅದಕ್ಕಾಗಿ ಗೃಹ ನಿರ್ಮಾಣ ಠೇವಣಿಯನ್ನು ನಿರ್ಮಿಸುವುದರಿಂದ ಈ ಉದ್ದೇಶಕ್ಕಾಗಿ ಮಾಡಲಾದ ಉಳಿತಾಯಗಳನ್ನು ಕ್ರೋಡೀಕರಿಸುವುದು ಸಾಧ್ಯವಾದೀತು. ಅಂತೆಯೇ ಒಂದು ಸದೃಢ ಪರಿಯೋಜನೆಗಾಗಿ ಸಾಲದ ಭರವಸೆ ನೀಡಬಲ್ಲ ಸಂಸ್ಥೆಯೊಂದರಲ್ಲಿ ರೈತರು ತಮ್ಮ ಉಳಿತಾಯಗಳನ್ನು ಠೇವಣಿ ಮಾಡುವಂತೆ ಅವರನ್ನು ಪ್ರೇರೇಪಿಸಬಹುದು. ಅನೇಕ ದೇಶಗಳಲ್ಲಿ, ಸಾಲ ಪಡೆಯಬಹುದಾದ ಠೇವಣಿಗಳು ಗೃಹ ಘಟಕಗಳಿಗೆ ಅದರಲ್ಲೂ ಕೆಳ ಹಾಗೂ ಮಧ್ಯಮ ವರಮಾನ ಗುಂಪುಗಳಿಗೆ ತುಂಬಾ ಆಕರ್ಷಕವಾಗಿವೆ. ಸಾಲಸೌಲಭ್ಯಕ್ಕೆ ಜೋಡಿಸಬಹುದಾದ ಹಾಗೂ ಕ್ರಮವಾದ ಕರಾರಿನ ಆಧಾರದ ಮೇಲೆ ಮನೆಮನೆಗೆ ಹೋಗಿ ಅತಿ ಬಡವರಿಂದ ಠೇವಣಿಗಳನ್ನು ಸಂಗ್ರಹಿಸುವುದರಿಂದ ವಹಿವಾಟು ವೆಚ್ಚಗಳು ಕಡಿಮೆಯಾಗಬಲ್ಲವು ಮತ್ತು ಠೇವಣಿ ಸಂಲೇಖಗಳ ಉತ್ಪಾದಕತೆ ಸುಧಾರಿಸಬಹುದು. ಪಿಗ್ಮಿ ಠೇವಣಿಗಳೆಂದು ಕರೆಯಲಾದ ಇಂಥ ಠೇವಣಿಗಳು ಭಾರತದಲ್ಲಿ ಕಡಿಮೆ ವರಮಾನದ ಗುಂಪುಗಳಲ್ಲಿ ಬಹಳ ಬಳಕೆಯಲ್ಲಿವೆ.

ಮುಪ್ಪಿನ ಸಮಯದಲ್ಲಿ ನೆರವಿಗೆ ಬರುವುದೇ ಮುಂತಾದ ಮೂಲ ಉದ್ದೇಶಗಳಿಗೆ ಹೊಂದಿಸಲಾಗುತ್ತಿರುವ ಕಡ್ಡಾಯ ಭವಿಷ್ಯ ಮತ್ತು ಪಿಂಚಣಿ ನಿಧಿ ಯೋಜನೆಗಳು ಭಾರತ, ಮಲೇಷಿಯ, ಟರ್ಕಿ ಮುಂತಾದ ಹಲವು ದೇಶಗಳಲ್ಲಿ ಆಕರ್ಷಕವಾಗಿರುವುದು ಸಿದ್ಧವಾಗಿದೆ. ಸಾಧ್ಯವಾದಷ್ಟು ವಲಯಗಳಲ್ಲಿಯ ಕೂಲಿ ಮತ್ತು ಸಂಬಳ ಪಡೆಯುವವರನ್ನು ಒಳಗೊಳ್ಳುವಂಥ ಇಂಥ ಯೋಜನೆಗಳನ್ನು ಜಾರಿಗೆ ತರಬೇಕು. ಸಾಮಾಜಿಕ ಭದ್ರತಾ ಠೇವಣಿಗಳು ಪೂರ್ಣಭವಸಾಮರ್ಥ್ಯವನ್ನು ಬಳಸಿಕೊಳ್ಳಬೇಕು. ಆದರೆ ಉದ್ಯೋಗದಾತರ ದೇಣಿಗೆಗಳಿಂದಾಗಿ ಈ ಯೋಜನೆಗಳು ಕೂಲಿಯ ಪರಿಣಾಮಕಾರಿ ವೆಚ್ಚವನ್ನು ಹೆಚ್ಚಿಸುವ ಪ್ರವೃತ್ತಿಯನ್ನು ಹೊಂದಿರುತ್ತವೆ. ಈ ಪರಿಣಾಮವನ್ನು ನಿವಾರಿಸಲು ಈ ಯೋಜನೆಗಳನ್ನು ಉದ್ಯೋಗದಾತರ ದೇಣಿಗೆಗಳ ಅಗತ್ಯವಿಲ್ಲದ ರೀತಿಯಲ್ಲಿ ರೂಪಿಸುವುದು.

ಜೀವವಿಮಾ ಪಾಲಿಸಿಗಳು ಇನ್ನೂ ಹೆಚ್ಚು ವ್ಯಾಪಕವಾಗಿ ಲಭ್ಯವಿರುವಂತೆ ಮಾಡಬೇಕು. ಕೃಷಿ ಉಳಿತಾಯಗಳನ್ನು ಪರಿಣಾಮಕಾರಿಯಾಗಿ ಸಂಗ್ರಹಿಸುವ ಬೆಳೆ ವಿಮೆ ಯೋಜನೆಗಳನ್ನು ಕೂಡ ಜಾರಿಗೆ ತರಲು ಸಾಧ್ಯವಾಗಬಹುದು. ಬೆಳೆ ವಿಮೆಯೂ ಸೇರಿದಂತೆ ವಿಮಾ ಪಾಲಿಸಿಗಳ ಮೇಲಣ ಕಂತುಗಳನ್ನು ವಿಮಾ ಸಹಿತ ಠೇವಣಿ ಯೋಜನೆಗಳ ಮೂಲಕ ಸಂಗ್ರಹಿಸಲು ಬ್ಯಾಂಕ್ ಶಾಖೆಗಳನ್ನು ಉಪಯೋಗಿಸಿಕೊಂಡರೆ ವಹಿವಾಟಿನ ವೆಚ್ಚಗಳನ್ನು ಕಡಿಮೆಗೊಳಿಸುವುದರ ಜೊತೆಗೆ ಭಾವೀ ಉಳಿತಾಯಗಳನ್ನು ಕ್ರೋಡೀಕರಿಸಬಹುದು. ಕೆಲವು

ಠೇವಣಿಗಳನ್ನು ಜೀವವಿಮೆ ಹಾಗೂ ಬೆಳೆ ವಿಮೆಗಳ ಜೊತೆಗೆ ಜೋಡಿಸಬಹುದು.

ಸಾಂಸ್ಥಿಕ ಮತ್ತು ನೀತಿ ಕ್ರಮಗಳು

ಹಣಕಾಸು ಉಳಿತಾಯಗಳನ್ನು ಉತ್ತೇಜಿಸಲು ಸಾಂಸ್ಥಿಕ ಹಾಗೂ ನೀತಿ ಕುರಿತ ಹಲವು ಕ್ರಮಗಳು ಅಗತ್ಯವೆಂದು ತೋರುತ್ತದೆ. ಪ್ರಥಮವಾಗಿ ಉಳಿತಾಯ ಹಾಗೂ ಸ್ಥಿರ ಠೇವಣಿಗಳ ಉಳಿತಾಯ ಹಾಗೂ ಸ್ಥಿರ ಠೇವಣಿಗಳ ರೂಪದ ಆಸ್ತಿಯನ್ನು ಹೊಂದಲು ಕಂಪನೀತರ ವಲಯ ಹೆಚ್ಚಿನ ಒಲವು ತೋರಿಸುತ್ತಿರುವುದರಿಂದ ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆಯ ಭೌಗೋಳಿಕ ಹಾಗೂ ಕಾರ್ಯಭಾರಾತ್ಮಕ ವ್ಯಾಪ್ತಿಯನ್ನು ವಿಸ್ತರಿಸುವುದಕ್ಕೆ ಮತ್ತು ಆಣಿಗೊಳಿಸುವುದಕ್ಕೆ ಆದ್ಯತೆ ನೀಡಬೇಕು. ಅನೇಕ ದೇಶಗಳಲ್ಲಿ ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆ ನಗರೀಯ ಒಲವುಳ್ಳದ್ದಾಗಿದೆ ಮತ್ತು ದೊಡ್ಡ ಕೈಗಾರಿಕೆ ಮತ್ತು ವ್ಯಾಪಾರಕ್ಕೆ ಹಣ ಒದಗಿಸುವತ್ತ ಅನುಸ್ಥಾಪಿತವಾಗಿದೆ. ಗ್ರಾಮಾಂತರ ಪ್ರದೇಶಗಳ ಉಳಿತಾಯವನ್ನು ಹೆಚ್ಚಾಗಿ ಕ್ರೋಡೀಕರಿಸಿಲ್ಲ. ಏಕೆಂದರೆ ಪಟ್ಟಣದ ಬ್ಯಾಂಕುಗಳು ಠೇವಣಿ ಸಂಲೇಖಗಳನ್ನು ಪಡೆಯಲು ಮಾಡಬೇಕಾದ ವಹಿವಾಟು ವೆಚ್ಚ (ಪ್ರಯಾಣದ ವೆಚ್ಚ, ವ್ಯಯಿಸಿದ ಕಾಲ ಮತ್ತು ಅಪರಿಚಿತ ಭಾಷೆ ಮತ್ತು ವಿಧಿವಿಧಾನಗಳು) ಹೆಚ್ಚಾಗಿರುತ್ತದೆ. ಹೊಸ ಸಂಸ್ಥೆಗಳನ್ನು ನಿರ್ಮಿಸುವ ಬದಲು ಬ್ಯಾಂಕ್ ಶಾಖೆಗಳ ರಾಷ್ಟ್ರವ್ಯಾಪಿ ಜಾಲಗಳ ರಚನೆಯ ಮೂಲಕ ಮತ್ತು ಅವುಗಳ ಕಾರ್ಯಭಾರಗಳ ವಿಸ್ತರಣೆಯ ಮೂಲಕ ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆ ವ್ಯಾಪ್ತಿಯನ್ನು ವಿಸ್ತರಿಸುವುದು ಹೆಚ್ಚು ತರ್ಕಬದ್ಧವೂ, ಮಿತವ್ಯಯಕಾರಿಯೂ ಆಗಿರುತ್ತದೆ. ಉದರಿಯ ವಿತರಣೆ ಠೇವಣಿ ಸಂಗ್ರಹಣೆಯೇ ಅಲ್ಲದೆ ಕೃಷಿ ಮತ್ತು ಸಣ್ಣ ಕೈಗಾರಿಕೆ ವಲಯಗಳಿಗೆ ಹಣಕಾಸಿನ ಹಾಗೂ ಹಣಕಾಸೇತರ ನೆರವು ಒದಗಿಸುವ ಅಭಿಕರಣಗಳೊಂದಿಗೆ ತಮ್ಮ ಕಾರ್ಯಭಾರಗಳನ್ನು ನಿಕಟವಾಗಿ ಹೊಂದಿಸಿಕೊಂಡು ವಾಣಿಜ್ಯ ಬ್ಯಾಂಕುಗಳು ಈ ವಲಯಗಳಿಗೆ ಉದ್ಯಮಶೀಲ ಹಾಗೂ ವ್ಯವಸ್ಥಾಪನ ಮಾರ್ಗದರ್ಶನವನ್ನು ನೀಡಬಲ್ಲವು, ನೀಡಬೇಕು. ಎರಡನೆಯದಾಗಿ, ಸಹಕಾರಿ ಬ್ಯಾಂಕುಗಳು ಉದರಿ ಸಂಘಗಳು ಮತ್ತು ಲೇವಾದೇವಿಗಾರರೊಂದಿಗೆ ಕೂಡ ವಾಣಿಜ್ಯ ಬ್ಯಾಂಕುಗಳು ಹತ್ತಿರದ ಸಂಬಂಧಗಳನ್ನು ಸ್ಥಾಪಿಸಿದ ಪಕ್ಷದಲ್ಲಿ ಬ್ಯಾಂಕುಗಳಿಗೇ ಅಲ್ಲದೆ ಉಳಿತಾಯದಾರರಿಗೂ ಒಟ್ಟಾರೆ ವಹಿವಾಟುಗಳ ವೆಚ್ಚವನ್ನು ತಗ್ಗಿಸಬಹುದು.

ಈ ಅಭಿಕರಣಗಳು—ಎಂದರೆ ಸಹಕಾರಿ ಬ್ಯಾಂಕುಗಳು, ಉದರಿ ಸಹಕಾರಿ ಸಂಘಗಳು ಮತ್ತು ಲೇವಾದೇವಿಗಾರರು—ಗ್ರಾಹಕರನ್ನು ಕುರಿತ ತಮ್ಮ ವೈಯಕ್ತಿಕ ತಿಳಿವಳಿಕೆಯ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತವೆ ಮತ್ತು ಇವುಗಳ ಕಲಾಪ ವಿಧಾನಗಳು ಅನೌಪಚಾರಿಕವಾಗಿವೆ.ಉಳಿತಾಯದಾರರಿಗೆ ಹಾಗೂ ಸಾಲಗಾರರಿಗೆ ಹೇಗೋ ಹಾಗೆ ಈ ಅಭಿಕರಣಗಳಿಗೆ ಕೂಡ, ವಾಣಿಜ್ಯ ಬ್ಯಾಂಕುಗಳೊಂದಿಗೆ ಹೋಲಿಸಿದಲ್ಲಿ, ಅವುಗಳ ವಹಿವಾಟು ವೆಚ್ಚಗಳು ಕಡಿಮೆಯಾಗಿರುತ್ತವೆ. ಬ್ಯಾಂಕುಗಳ ಪಾತ್ರವೂ ಉದರಿ ಸಹಕಾರಿ ಸಂಘಗಳು, ಗ್ರಾಮೀಣ ಸಹಕಾರಿ ಬ್ಯಾಂಕುಗಳು ಮುಂತಾದವುಗಳ ಪಾತ್ರವೂ ಪರಸ್ಪರ ಪೂರಕವಾಗಿರುತ್ತವೆ ಎಂಬುದು ಅನುಭವವೇದ್ಯವಾಗುತ್ತದೆ.

ಸಹಕಾರಿ ಸಂಸ್ಥೆಗಳು ನಿಧಿ ಸಂಗ್ರಹಿಸುವುದರಲ್ಲಿ ಹಿಂದುಳಿದಿವೆ. ಆದರೆ ಗ್ರಾಮೀಣ ಬ್ಯಾಂಕುಗಳು ಮತ್ತು ಲೇವಾದೇವಿದಾರರಂತೆ ಅವು ಒಳ್ಳೆಯ ಸಾಲ ನೀಡಿಕೆಯ ಅಭಿಕರಣಗಳಾಗಿವೆ. ಏಕೆಂದರೆ ಸಾಮೂಹಿಕ ಸಾಲಗಳು ಮತ್ತು ಸಾಮೂಹಿಕ ತಾಂತ್ರಿಕ ನೆರವಿನಂತಹ ನವೀನ ವಿಧಾನಗಳ ಮೂಲಕ ಕಡಿಮೆ ಆಡಳಿತ ವೆಚ್ಚದಲ್ಲಿ ಅವು ಸಣ್ಣ ಉದ್ಯಮಿಗಳನ್ನು ನಿಲುಕಬಲ್ಲವು. ಆರ್ಥಿಕೇತರ ನಿರ್ಬಂಧಗಳನ್ನು ವಿಧಿಸುವುದರ ಮೂಲಕ(ವಿಶೇಷವಾಗಿ ಸಾಮೂಹಿಕ ಒತ್ತಡ) ಅವು ಸಾಲ ಮರುಪಾವತಿಯನ್ನು ಒತ್ತಾಯಿಸಬಹುದು ; ಸಣ್ಣ ಉದ್ಯಮಿಗಳ ನಿರ್ದಿಷ್ಟ ಅಗತ್ಯಗಳು ಮತ್ತು ಆವಶ್ಯಕತೆಗಳಿಗೆ ಅನುಗುಣವಾಗಿ ಹಣಕಾಸಿನ ಸಂಲೇಖಗಳನ್ನು ಮತ್ತು ಕಾರ್ಯವಿಧಾನಗಳನ್ನು ರೂಪಿಸಬಹುದು ಮತ್ತು ಬ್ಯಾಂಕುಗಳ ವೇತನಶ್ರೇಣಿಗಳಿಗಿಂತ ಕಡಿಮೆಯ ವೇತನಶ್ರೇಣಿಗಳಲ್ಲಿ ಸಿಬ್ಬಂದಿಯನ್ನು ನೇಮಿಸಿಕೊಳ್ಳಬಹುದು. ಆದರೆ ಬ್ಯಾಂಕುಗಳು ಅಗಾಧ ಸಂಪನ್ಮೂಲಗಳನ್ನು ನಿರ್ವಹಿಸುವ ಸ್ಥಿತಿಯಲ್ಲಿರುತ್ತವೆ. ಹೀಗೆ ಅವು ಸಹಕಾರ ಸಂಘಗಳ ಮತ್ತು ಅಂತಹ ಇತರ ಸಂಸ್ಥೆಗಳ ಸಂಪನ್ಮೂಲ ಪರಿಸ್ಥಿತಿಗಳನ್ನು ಬಲಪಡಿಸಬಲ್ಲುವಾಗಿವೆ.

ತೈವಾನ್, ಚೀನಾ ಪ್ರಾಂತ್ಯ, ಕೊರಿಯಾ ಗಣರಾಜ್ಯ ಮತ್ತು ಭಾರತ–ಇಂತಹ ದೇಶಗಳಲ್ಲಿಯಂತೆ ಎಲ್ಲೆಲ್ಲಿ ಈ ಪಾತ್ರಗಳ ಪರಸ್ಪರ ಪೂರಕತೆಯನ್ನು ಗಮನಿಸಲಾಗಿದೆಯೋ ಅಲ್ಲಿ ಈ ಪಾತ್ರಗಳನ್ನು ಸ್ಪರ್ಧಾತ್ಮಕವೆಂದು ಪರಿಗಣಿಸಲಾಗಿರುವ ದೇಶಕ್ಕಿಂತ ಉತ್ತಮವಾದ ರೀತಿಯಲ್ಲಿ ಸಣ್ಣ ಉದ್ಯಮಗಳಿಂದ (ಕೃಷಿ ಮತ್ತು ಕೃಷೀತರ) ಸಂಪನ್ಮೂಲಗಳನ್ನು ಸಂಗ್ರಹಿಸಲು ಹಾಗೂ ಅವನ್ನು ಹರಿಯಿಸಲು ಹಣಕಾಸು ಸಂರಚನೆ ಸಮರ್ಥವಾಗಿರುತ್ತದೆ. ಹೇಗೆ ಮತ್ತು ಯಾವ ಅಭಿಕರಣಗಳ ಮೂಲಕ ಬ್ಯಾಂಕುಗಳು ಮಹತ್ವಪೂರ್ಣ ಸಂಬಂಧಗಳನ್ನು ರೂಪಿಸಬೇಕು ಎಂಬುದು ನಿರ್ದಿಷ್ಟ ಸನ್ನಿವೇಶಗಳನ್ನು ಅವಲಂಬಿಸಿರುತ್ತದೆ. ಮಲೇಷಿಯಾ ಮತ್ತು ಇಂಡೋನೇಶಿಯಾಗಳಲ್ಲಿ ಬ್ಯಾಂಕುಗಳು ಸಾಲನೀಡಿಕೆಗೆ ಸ್ಥಳೀಯ ಅಭಿಕರಣಗಳನ್ನು—ಬಹುತೇಕ ವ್ಯಾಪಾರಿಗಳು ಮತ್ತು ಲೇವಾದೇವಿಗಾರರನ್ನು—ಬಳಸಿಕೊಂಡಿವೆ. ತೈವಾನ್, ಚೀನಾ ಪ್ರಾಂತ್ಯ ಮತ್ತು ಕೊರಿಯಾಗಳಲ್ಲಿ ಈ ಕಾರ್ಯಭಾರವನ್ನು ಬೇಸಾಯಗಾರರ ಸಂಘಗಳು ಬಹಳ ಪರಿಣಾಮಕಾರಿಯಾಗಿ ನಿರ್ವಹಿಸಿವೆ. ಔಪಚಾರಿಕ ಮತ್ತು ಅನೌಪಚಾರಿಕವೆನಿಸುವ ಮಾರುಕಟ್ಟೆಗಳ ನಡುವೆ ಸಂಬಂಧ ಏರ್ಪಡಿಸಲು ನವೀನ ಉಪಗಮನಗಳು ಅಗತ್ಯ.

ಮೂರನೆಯದಾಗಿ, ಉಳಿತಾಯದಾರರು ತಮ್ಮ ಉಳಿತಾಯವನ್ನು ಬ್ಯಾಂಕ್ ಠೇವಣಿಗಳ ರೂಪದಲ್ಲಿ ಇಡಲು ಪ್ರೇರೇಪಿಸುವಂತೆ ಬಡ್ಡಿದರದ ಸಂರಚನೆ ಇರಬೇಕೇ ಹೊರತು, ಖಾಸಗಿ ಲೇವಾದೇವಿಯ ಅಥವಾ ಸ್ಥಿರ ಸ್ವತ್ತು ಸರಕುಗಳ ತಪಸೀಲು, ವಿದೇಶೀ ಚಲಾರ್ಥ ಇಂಥ ಅನುತ್ಪಾದಕ ಹಾಗೂ ಸಟ್ಟಾ ಆಸ್ತಿಗಳಲ್ಲಿ ವಿನಿಯೋಜನೆಯ ರೂಪದಲ್ಲಿಡಲು ಪ್ರೇರೇಪಿಸುವಂತಿರಬಾರದು. ಬಡ್ಡಿ ಅಲ್ಲದೆ ಇತರ ಮೂರ್ತ ಮತ್ತು ಅಮೂರ್ತ ಲಾಭಗಳೂ ಸೇರಿದಂತೆ ಠೇವಣಿ ಸಂಲೇಖಗಳ ಮೇಲಣ ನೈಜ ಪ್ರತಿಫಲವೂ ಉಳಿತಾಯಗಾರರನ್ನು ಆಕರ್ಷಿಸುವಷ್ಟು ಉನ್ನತ ಮಟ್ಟದಲ್ಲಿರಬೇಕು. ನಾನಾ ಬಗೆಯ ಠೇವಣಿಗಳ ಮೇಲಣ ಹಣರೂಪಿ ಹುಟ್ಟುವಳಿಯು ಖಾಸಗಿ ಸಾಲ ನೀಡಿಕೆಯ ಮೇಲಣ ನಷ್ಟಸಂಭವದ ವಿಮಾ ಕಂತನ್ನು ಕಳೆದರೆ ಉಳಿಯುವ ಪ್ರತಿಫಲಕ್ಕೆ ಹೋಲಿಸುವಂತಿರಬೇಕು. ಹಿಂದೆ ಖಾಸಗಿ ಲೇಣಿದಾರರ ಏಕಸ್ವಾಮ್ಯದಲ್ಲಿದ್ದ ಸಾಲ ನೀಡಿಕೆಯ ಕ್ಷೇತ್ರಗಳನ್ನು ಬ್ಯಾಂಕುಗಳು ಪ್ರವೇಶಿಸಿದಲ್ಲಿ ಖಾಸಗಿ ಸಾಲ ನೀಡಿಕೆಯ ಮೇಲಣ ಪ್ರತಿಫಲದ ಇಳಿಮೆಯ ಸಾಧ್ಯತೆಯನ್ನೂ ಅಂತಹ ಸಾಲ

ನೀಡಿಕೆಗೆ ಲಗತ್ತಾದ ನಷ್ಟಸಂಭವ ವಿವಹಾ ಕಂತನ್ನೂ ಗಮನಕ್ಕೆ ತಂದುಕೊಂಡು ಖಾಸಗಿ ನೀಡಿಕೆಯ ಮೇಲಣ ಬಡ್ಡಿದರಗಳಿಗೆ ತಕ್ಕುದಾಗಿ ಠೇವಣಿಗಳ ಮೇಲಣ ಬಡ್ಡಿದರಗಳನ್ನು ನಿರ್ಧರಿಸಬೇಕು.

ನಾಲ್ಕನೆಯದಾಗಿ, ಕಡಿಮೆ ಅಭಿವೃದ್ಧಿ ಹೊಂದಿರುವ ದೇಶಗಳಲ್ಲಿರುವ ಗ್ರಾಮೀಣ ಪ್ರದೇಶಗಳಲ್ಲಿ ಗಮನಾರ್ಹ ವಿನಿಯೋಜನೆ ಧನೇತರ ರೂಪದಲ್ಲಿ ನಡೆಯುತ್ತದೆ. ಕುಟುಂಬೋಪಯೋಗಿ ಗುಡಿಸಲು ನಿರ್ಮಾಣಕ್ಕಾಗಿ, ಸಣ್ಣ ನೀರಾವರಿ ಕಾಮಗಾರಿಗಳಿಗಾಗಿ, ಗ್ರಾಮಗಳ ಒಳಗಿನ ರಸ್ತೆಗಳಿಗಾಗಿ, ಜಮೀನನ್ನು ಮಟ್ಟಮಾಡುವುದಕ್ಕಾಗಿ ಮತ್ತು ಸವರುವುದಕ್ಕಾಗಿ, ಕುಟುಂಬದ ದುಡಿಮೆಯನ್ನು ಬಳಸಲಾಗುತ್ತದೆ. ಸಣ್ಣ ನೀರಾವರಿ ಸೌಲಭ್ಯಗಳು, ಪೂರಕ ರಸ್ತೆಗಳು, ಶಾಲಾಕಟ್ಟಡಗಳು, ಸಮುದಾಯ ಭವನಗಳು, ಸ್ವಚ್ಛತೆ ಹಾಗೂ ಕುಡಿಯುವ ನೀರಿನ ಸೌಲಭ್ಯಗಳು–ಇಂತಹ ನೈಜ ಆಸ್ತಿಗಳನ್ನು ಸಮುದಾಯದ ಸದಸ್ಯರುಗಳ ಸ್ವಯಂದುಡಿಮೆಯಿಂದ ಸಮುದಾಯದ ಮಟ್ಟದಲ್ಲಿ ನಿರ್ಮಿಸಬಹುದು. ಸಮೂಹಖಾತರಿಯ ಆಧಾರದ ಮೇಲೆ ಸಮೂಹ ಸಾಲ ನೀಡಿಕೆಗಳಂತಹ ಸಾಲನೀಡಿಕೆ ಸಂಲೇಖಗಳನ್ನು ರೂಪಿಸಿ ಕುಟುಂಬದ ಹಾಗೂ ಸಮುದಾಯ ದುಡಿಮೆಯ ಉತ್ಪಾದಕತೆ ಉಪಯೋಗವಾಗುವಂತೆ ಹಣಕಾಸು ವ್ಯವಸ್ಥೆಯು ಅದನ್ನು ಸುಸೂತ್ರಗೊಳಿಸಬಹುದು; ಅಂತೆಯೇ ಪ್ರೇರೇಪಿಸಬಹುದು. ಆದರೆ ಏಕಕಾಲದಲ್ಲಿ ನಡೆಯುವ ಉಳಿತಾಯ ಮತ್ತು ವಿನಿಯೋಜನೆಯ ಕ್ರಿಯೆಯ ಪ್ರವರ್ತನೆ ಆಗಬೇಕಾದರೆ ಕೆಲಸ ಮಾಡುವವರಿಗೇ ಫಲ ಲಭ್ಯವಾಗುವಂತೆ ಆಗಬೇಕು. ಸ್ವಸಹಾಯ ಕ್ರಮಗಳಿಂದ ಸಾಮಾನ್ಯವಾಗಿ ಬಡವರಿಗೆ ಲಾಭವಾಗುವ ಬದಲು ನಷ್ಟವೇ ಆಗಿದೆ, ಪ್ರತಿಯಾಗಿ ಧನಿಕರಿಗೆ ಸಹಾಯವಾಗಿದೆ. ರೈತ ಕುಟುಂಬಗಳಿಗೆ ಹಿಡುವಳಿಯ ಭದ್ರತೆ ಇಲ್ಲದಲ್ಲಿ ಮತ್ತು ಗ್ರಾಮಸಮಾಜ ತೀವ್ರವಾಗಿ ಶ್ರೇಣೀಕೃತವಾಗಿದ್ದು ಸಮುದಾಯದ ದುಡಿಮೆಯ ಲಾಭವನ್ನು ಧನಿಕರು ವಶಪಡಿಸಿಕೊಳ್ಳುವ ಅವಕಾಶವಿರುವಲ್ಲಿ ಮುಖ್ಯವಾಗಿ ಹೀಗಾಗುತ್ತದೆ. ಈ ವಿಚಾರದಲ್ಲಿ ಹೆಚ್ಚಿನ ಸಮತೆಯಿಂದ ಉಳಿತಾಯ ಮತ್ತು ವಿನಿಯೋಜನೆ ಪ್ರವರ್ತನೆಗೊಳ್ಳುತ್ತವೆ.

ಐದನೆಯದಾಗಿ, ಅನೌಪಚಾರಿಕ ಉದರಿ ಮಾರುಕಟ್ಟೆಗಳು ಬಹುಶಃ ಉಪಯುಕ್ತ ಉದ್ದೇಶವನ್ನು ಸಾಧಿಸುತ್ತವೆ. ಅವುಗಳ ಅಭಿವೃದ್ಧಿಗೆ ಕಾನೂನಿನ ಅಥವಾ ಮಾಮೂಲಿನ ಅಡೆತಡೆಗಳಿರಬಾರದು. ಹಣಕಾಸು ವಹಿವಾಟುಗಳಿಗೆ ಹೊಸ ಅವಕಾಶಗಳನ್ನು, ಎಂದರೆ ಹೊಸ ಉತ್ಪನ್ನಗಳ ಹಾಗೂ ಪ್ರಕ್ರಿಯೆಗಳ ಅಗತ್ಯವಿರುವ ಹೊಸ ಮಾರುಕಟ್ಟೆಗಳನ್ನು ಗುರುತಿಸುವಲ್ಲಿ ಅನೌಪಚಾರಿಕ ಮಾರುಕಟ್ಟೆ ವಹಿವಾಟುದಾರರು ಹಲವೊಮ್ಮೆ ಬ್ಯಾಂಕುಗಳಿಗಿಂತ ಹೆಚ್ಚಿನ ಅವಕಾಶಗಳನ್ನು ಹೊಂದಿರುತ್ತಾರೆ. ಅವಕ್ಕೆ ಮಾಹಿತಿ ಸುಲಭವಾಗಿ ದೊರೆಯುವಂತಿದ್ದರೆ ಅವುಗಳ ವಹಿವಾಟು ವೆಚ್ಚಗಳು ಮತ್ತು ಅಂತಹ ಪ್ರಯೋಗಗಳಿಗೆ ಸಂಬಂಧಿಸಿದ ನಷ್ಟ ಸಂಭವಗಳು ಅಧಿಕವಾಗಿರಲಾರವು. ಅಲ್ಲದೆ ಔಪಚಾರಿಕ ಮಾರುಕಟ್ಟೆಗಳ ಬೆಳವಣಿಗೆ ಮತ್ತು ವಿಸ್ತರಣೆಗಳಿಂದಾಗಿ ಅನೌಪಚಾರಿಕ ವಹಿವಾಟುದಾರರು ನವೀನ ವಿಧಾನಗಳನ್ನು ಅನ್ವೇಷಿಸುವುದು ಅಗತ್ಯವಾಗುತ್ತದೆ.

### ಕೇಂದ್ರ ಬ್ಯಾಂಕಿನ ನೆರವು

ಹಣಕಾಸು ಸಂರಚನೆಯನ್ನು ಉತ್ತಮಪಡಿಸಲು ಮತ್ತು ಹೆಚ್ಚು ಚಲನಶೀಲ ಉದರಿ ಮಾರುಕಟ್ಟೆಗಳನ್ನು ಉತ್ತೇಜಿಸಲು ಕೇಂದ್ರ ಅಭಿಕರಣವೊಂದು ಸ್ವಸ್ಥ ಹಣಕಾಸು ಸಂರಚನೆಯ ಪ್ರವರ್ತನೆಯ ಹೊಣೆ ಹೊರಬೇಕು. ಹಣಕಾಸು ಅಭಿವೃದ್ಧಿಯ ದೃಷ್ಟಿಯಿಂದ ಕೇಂದ್ರ ಬ್ಯಾಂಕನ್ನು ಅಭಿವೃದ್ಧಿ ಹೊಂದಿದ್ದನ್ನಾಗಿ ಮಾಡುವುದು ಅಗತ್ಯ.

ಕೈಗಾರಿಕಾ ದೇಶಗಳಲ್ಲಿ ಕೇಂದ್ರ ಬ್ಯಾಂಕುಗಳು ಸ್ಥಾಪಿತವಾದಾಗ ಹಣ ಮತ್ತು ಹಣಕಾಸು ವ್ಯವಸ್ಥೆಗಳು ಆ ವೇಳೆಗಾಗಲೇ ಚೆನ್ನಾಗಿ ಅಭಿವೃದ್ಧಿ ಹೊಂದಿದ್ದವು. ಹಾಗಾಗಿ ಕೇಂದ್ರ ಬ್ಯಾಂಕಿಂಗಿನ ಸಿದ್ಧಾಂತ ಹಾಗೂ ಆಚರಣೆಯಲ್ಲಿ ಒತ್ತು ನೀಡಿರತಕ್ಕದ್ದು ಕೇಂದ್ರ ಬ್ಯಾಂಕಿನ ನಿಯಂತ್ರಕ ಪಾತ್ರಕ್ಕೆ. ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಿಯಂತ್ರಿಸಬೇಕಾದ ಸಂಸ್ಥೆಗಳು ಮತ್ತು ನಿಯಮಗೊಳಿಸಬೇಕಾದ ಉದರಿ ಪದ್ಧತಿ ಇನ್ನೂ ವಿಕಾಸಗೊಳ್ಳಬೇಕಾಗಿರುವುದರಿಂದ ಅವುಗಳಲ್ಲಿ ಕೇಂದ್ರ ಬ್ಯಾಂಕಿನ ಪಾತ್ರವನ್ನು ಕೇವಲ ನಿಯಂತ್ರಣಕ್ಕೆ, ಸೀಮಿತಗೊಳಿಸಲಾಗದು. ಕಡಿಮೆ ಅಭಿವೃದ್ಧಿಹೊಂದಿದ ದೇಶಗಳಿಗೆ ತಾಂತ್ರಿಕ ಮತ್ತು ಹಣಕಾಸು ಸಹಾಯ ಒದಗಿಸುವಲ್ಲಿ ಕೇಂದ್ರ ಬ್ಯಾಂಕಿನ ಪ್ರವರ್ತಕ ಪಾತ್ರಕ್ಕೆ ಸಾಕಷ್ಟು ಒತ್ತು ನೀಡಿಲ್ಲ. ಸಾಮಾನ್ಯವಾಗಿ ಅಭಿವೃದ್ಧಿಯ ಧ್ಯೇಯಗಳಿಗೆ ಅಥವಾ ನಿರ್ದಿಷ್ಟವಾಗಿ ಸ್ವಸ್ಥ ಹಣಕಾಸು ವ್ಯವಸ್ಥೆಯ ವಿಕಾಸಕ್ಕೆ ಹೆಚ್ಚಿನ ಸಂಖ್ಯೆಯ ಕೇಂದ್ರ ಬ್ಯಾಂಕುಗಳು ಯುಕ್ತವಾಗಿ ಅನುಸ್ಥಾಪಿತವಾಗಿಲ್ಲ.

ಬ್ರೆಜಿಲ್, ಭಾರತ, ಕೊರಿಯಾ ಗಣರಾಜ್ಯ ಮತ್ತು ಮೆಕ್ಸಿಕೋ ಇವುಗಳ ಅಪವಾದಗಳೂ ಜಪಾನಿನ ಚಾರಿತ್ರಿಕ ಅನುಭವವೂ ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳ ಕೇಂದ್ರ ಬ್ಯಾಂಕಿಂಗಿನ ಅಪೇಕ್ಷಣೀಯ ನವೀನ ಪ್ರಯೋಗಗಳ ಸ್ವರೂಪವನ್ನು ಸೂಚಿಸುತ್ತವೆ. ಸ್ವಸ್ಥ ಹಣಕಾಸು ಸಂರಚನೆಯ (ಸಂಸ್ಥೆಗಳು, ಸಂಲೇಖಗಳು ಮತ್ತು ಬಡ್ಡಿ ದರಗಳು) ವಿಕಾಸದಲ್ಲಿ ಮುಂದಾಳುತನವನ್ನು ತೆಗೆದುಕೊಳ್ಳುವುದು ಅಭಿವೃದ್ಧಿಶೀಲ ದೇಶದ ಕೇಂದ್ರ ಬ್ಯಾಂಕಿನ ಮುಖ್ಯ ಕಾರ್ಯಭಾರವಾಗಿರಬೇಕು. ತನ್ನ ನಿಯಂತ್ರಕ ಕಾರ್ಯಭಾರದ ಯಶಸ್ಸಿಗೆ ಅಗತ್ಯವಾದ ಉದರಿ ವ್ಯವಸ್ಥೆಯೊಂದಿಗೆ ನಿಕಟವಾದ, ನಿರಂತರವಾದ ಮತ್ತು ಕ್ರಿಯಾಶೀಲವಾದ ಸಂಪರ್ಕವನ್ನು ಕೇಂದ್ರ ಬ್ಯಾಂಕು ಉಳಿಸಿಕೊಳ್ಳುವುದು ಸಾಧ್ಯವಾಗಿರುವಂತೆ ಈ ಕಾರ್ಯಭಾರವನ್ನು ನಿರ್ವಹಿಸುವುದು ಅಗತ್ಯ. (1) ಬ್ಯಾಂಕಿಂಗ್ ವ್ಯವಸ್ಥೆಯ ಭೌಗೋಳಿಕ ಹಾಗೂ ಕಾರ್ಯಭಾರಾತ್ಮಕ ವ್ಯಾಪ್ತಿಯನ್ನು ವಿಶಾಲವಾಗಿಯೂ ಆಳವಾಗಿಯೂ ಮಾಡುವುದು, (2) ಬ್ಯಾಂಕಿಂಗ್ ವ್ಯವಸ್ಥೆಗೂ ಅನೌಪಚಾರಿಕ ಉದರಿ ಮಾರುಕಟ್ಟೆಗಳಿಗೂ ನಡುವೆ ಒಂದು ಕಡೆ, ಬ್ಯಾಂಕಿಂಗ್ ವ್ಯವಸ್ಥೆಗೂ ಸಣ್ಣ ಉದ್ಯಮಶೀಲಮಾರ್ಗದರ್ಶನ ಹಾಗೂ ಸಹಾಯವನ್ನು ಒದಗಿಸುತ್ತಿರುವ ಅಭಿಕರಣಗಳಿಗೂ ನಡುವೆ ಇನ್ನೊಂದು ಕಡೆ ಸಾವಯವ ಸಂಬಂಧಗಳನ್ನು ಸ್ಥಾಪಿಸುವುದು, (3) ಅಭಿವೃದ್ಧಿ ಹಣಕಾಸು ನಿಗಮಗಳಂಥ ವಿಶೇಷೀಕೃತ ಹಣಕಾಸು ಸಂಸ್ಥೆಗಳಿಗೆ ಬ್ಯಾಂಕಿಂಗ್ ವ್ಯವಸ್ಥೆಯೊಂದಿಗೆ ಸಂಬಂಧ ಕಲ್ಪಿಸುವುದು, (4) ಸಾಮಾಜಿಕ ಭದ್ರತಾ ಸಂಸ್ಥೆಗಳನ್ನು ಪ್ರವರ್ತಿಸುವುದು ಮತ್ತು (5) ವಿವಿಧ ಹಣಕಾಸು ಸಂಲೇಖಗಳ ಗುಣಲಕ್ಷಣಗಳನ್ನು ಪ್ರತಿಬಿಂಬಿಸುವ ಒಂದು ಖಚಿತ ನೈಜ ಬಡ್ಡಿದರ ಸಂರಚನೆಯಾಗುವಂತೆ ಖಾತರಿಪಡಿಸಿಕೊಳ್ಳುವುದು—ಇಂತಹ ನವೋನ್ಮೇಷಕಾರಿ ನೀತಿಗಳ ಮೂಲಕ ಸುಸಂಬದ್ಧ ಹಾಗೂ ಸ್ವಸ್ಥ ಹಣಕಾಸು ಸಂರಚನೆಯ ಪ್ರವರ್ತನೆಯತ್ತ ಕೇಂದ್ರ ಬ್ಯಾಂಕು ಗಮನಹರಿಸಬೇಕು. ●

# ಬ್ಯಾಂಕಿಂಗ್ ಸುದ್ದಿಸಾರ

**ಕೆ. ಎನ್. ಮಹಾಬಲ**

## ರೂಪಾಯಿಯ ಸ್ಥಾನಮಾನ

1986 ಆಗಸ್ಟ್ ತಿಂಗಳಲ್ಲಿ ಅಖಿಲ ಭಾರತ ಮಟ್ಟದಲ್ಲಿ ರೂಪಾಯಿಯ ಮೌಲ್ಯ 14.88 ಪೈಸೆಗೆ ಇಳಿದಿತ್ತು. ಅದು ಬೊಂಬಾಯಿಯಲ್ಲಿ 14.10 ಪೈಸೆ ದೆಹಲಿಯಲ್ಲಿ 14.14 ಮದ್ರಾಸ್‌ನಲ್ಲಿ 14.79 ಕಲ್ಕತ್ತಾದಲ್ಲಿ 14.88 ಪೈಸೆ ಇತ್ತು. ಈ ಮೌಲ್ಯ ನಿಷ್ಕರ್ಷೆಗೆ 1969ರ ಬೆಲೆ ಸೂಚ್ಯಂಕಗಳು ಆಧಾರವಾಗಿದೆ.

## ಸ್ವಿಸ್ ಬ್ಯಾಂಕಿನಲ್ಲಿ ಭಾರತದ ಠೇವಣಿ

ಅಂತರರಾಷ್ಟ್ರೀಯ ಹಣಕಾಸು ನಿಧಿಯ ಒಂದು ಪ್ರಾಸಂಗಿಕ ಅಧ್ಯಯನದಂತೆ ಸ್ವಿಸ್ ಬ್ಯಾಂಕುಗಳಲ್ಲಿ ಇಡಲಾಗಿರುವ ಭಾರತದ ಠೇವಣಿಗಳು 1979ರಲ್ಲಿ 78.8 ಕೋಟಿ ಸ್ವಿಸ್ ಫ್ರ್ಯಾಂಕ್ ಇದ್ದುದು 1984ರಲ್ಲಿ 193.7 ಕೋಟಿ ಸ್ವಿಸ್ ಫ್ರ್ಯಾಂಕ್‌ಗಳಿಗೆ ಏರಿತು. ಇಷ್ಟಾಗಿಯೂ ಒಟ್ಟಾರೆ ಸ್ವಿಸ್ ಠೇವಣಿಯಲ್ಲಿ ಭಾರತದ ಪಾಲು ಶೇ. 0.6 ಮಾತ್ರ.

## ಡಾ. ರಂಗರಾಜನ್ ಸಮಿತಿ

ರಿಲಿಯನ್ಸ್ ಇಂಡಸ್ಟ್ರೀಸ್‌ನ ಷೇರು ಮತ್ತು ಡಿಬೆಂಚರ್‌ಗಳಿಗೆ ಕೆಲವು ವಾಣಿಜ್ಯ ಬ್ಯಾಂಕುಗಳು ಸಾಲ ನೀಡಿದ ವ್ಯವಹಾರಗಳನ್ನು ತನಿಖೆ ನಡೆಸಲು ರಿಸರ್ವ್ ಬ್ಯಾಂಕ್ ಡಾ. ಸಿ. ರಂಗರಾಜನ್ ಅವರ ನೇತೃತ್ವದಲ್ಲಿ ಸಮಿತಿಯೊಂದನ್ನು ನೇಮಿಸಿದ್ದು ಅದು ಇನ್ನೆರಡು ತಿಂಗಳಲ್ಲಿ ವರದಿ ಸಲ್ಲಿಸಲಿದೆ.

## ಸಾರ್ವಜನಿಕ ಕಂಪನಿ ಠೇವಣಿ ಮತ್ತು ಬ್ಯಾಂಕುಗಳ ಕಾರ್ಯಸಾಧನೆ

ಕೇಂದ್ರ ಅರ್ಥ ಸಚಿವ ಶಾಖೆ ಬ್ಯಾಂಕುಗಳ ಕಾರ್ಯಸಾಧನೆಯನ್ನು ಮೌಲ್ಯಮಾಪನ ಮಾಡುವಾಗ ಅವು ಸಂಗ್ರಹಿಸಿರುವ ಸಾರ್ವಜನಿಕ ಕಂಪನಿ ಠೇವಣಿಯನ್ನು ಗಮನಕ್ಕೆ ತೆಗೆದುಕೊಳ್ಳದಿರಲು ನಿರ್ಧರಿಸಲಾಗಿದೆ. ಬ್ಯಾಂಕುಗಳ ನಡುವೆ ಕಲೆಹಾಕಿರುವ ಅನಾರೋಗ್ಯಕರ ಸ್ಪರ್ಧೆ ಇಂಥ ಕ್ರಮಕ್ಕೆ ಕಾರಣವೆನ್ನಲಾಗಿದೆ.

## ಭಾರತೀಯ ಸ್ಟೇಟ್ ಬ್ಯಾಂಕ್ ; ಬೆಂಗಳೂರು ಪ್ರಧಾನ ಕಚೇರಿಯ ಮುಖ್ಯರು

ಭಾರತೀಯ ಸ್ಟೇಟ್ ಬ್ಯಾಂಕ್‌ನ ಬೆಂಗಳೂರು ವೃತ್ತದ ಮುಖ್ಯ ಪ್ರಧಾನ ವ್ಯವಸ್ಥಾಪಕರಾಗಿ ಶ್ರೀ ಎಚ್. ಆರ್. ಕಾಮತ್ ಅಧಿಕಾರ ವಹಿಸಿಕೊಂಡಿದ್ದಾರೆ. ಮುಂಚೆ ಈ ಸ್ಥಾನದಲ್ಲಿದ್ದ ಶ್ರೀ ಎಂ. ವಿ. ಸುಬ್ರಹ್ಮಣ್ಯಂ ಮೈಸೂರು ಬ್ಯಾಂಕ್‌ನ ವ್ಯವಸ್ಥಾಪಕ ನಿರ್ದೇಶಕರಾಗಿ ನೇಮಕವಾಗಿದ್ದಾರೆ.

## ಅನಿವಾಸಿ ಖಾತೆದಾರರಿಗೆ ವಿಶೇಷ ಚೆಕ್ಕುಗಳು

ಅನಿವಾಸಿ ಭಾರತೀಯ ಖಾತೆಗಳನ್ನು ನಿರ್ವಹಿಸುತ್ತಿರುವ ವಾಣಿಜ್ಯ ಬ್ಯಾಂಕುಗಳು, ಅನಿವಾಸಿ ಖಾತೆದಾರರಿಗೆ NRF ಎಂಬ ಅಧ್ಯಕ್ಷರುಗಳನ್ನು ಹೊಂದಿರುವ ವಿಶೇಷ ಚೆಕ್‌ಗಳನ್ನು ನೀಡಬೇಕೆಂದು ರಿಸರ್ವ್ ಬ್ಯಾಂಕ್ ಸೂಚಿಸಿದೆ. ಅನಿವಾಸಿ ಖಾತೆಯ ವ್ಯವಹಾರಗಳನ್ನು ಸುಲಭವಾಗಿ ಗುರುತಿಸಲು ಮತ್ತು ಕ್ಷಿಪ್ರವಾಗಿ ವಿಲೇವಾರಿ ಮಾಡಲು ಇಂಥ ಗುರುತಿನ ಚೆಕ್‌ಗಳಿಂದ ಸುಲಭಸಾಧ್ಯವಾಗಿದೆ.

## ಜಪಾನಿನ ವಿದೇಶೀ ಬ್ಯಾಂಕುಗಳು : ಕಹಿ ಅನುಭವದತ್ತ

ಜಪಾನ್‌ನಲ್ಲಿ ಕಾರ್ಯಾಚರಣೆ ನಡೆಸುತ್ತಿರುವ ವಿದೇಶೀ ಬ್ಯಾಂಕುಗಳು 31-3-86ಕ್ಕೆ ಮುಗಿದ ಆರ್ಥಿಕ ವರ್ಷದಲ್ಲಿ ಅತ್ಯಂತ ಕಹಿ ಅನುಭವಕ್ಕೆ ತುತ್ತಾಗಿವೆ. ವಿದೇಶೀವಿನಿಮಯ ಮತ್ತು ಬ್ಯಾಂಕ್ ವ್ಯವಹಾರಗಳು ಲಾಭ ತಂದರೂ ಆಸ್ತಿಗಳ ಮೇಲಿನ ಆದಾಯ ಶೇ. 0.19ಕ್ಕೆ ಇಳಿಯಿತು. ಜಪಾನೇತರ ಬ್ಯಾಂಕುಗಳಿಗೆ ಶೇ. 2ರಷ್ಟು ಮಾತ್ರ ಸಾಲ ಮಾರುಕಟ್ಟೆ ಲಭಿಸಿತ್ತು. ಉತ್ತಮ ಗ್ರಾಹಕರು ಲಭ್ಯವಾಗದ ಕಾರಣ ಬ್ಯಾಂಕ್ ಆಫ್ ಅಮೇರಿಕ ತನ್ನ ಆಸ್ತಿಯಲ್ಲಿ ಶೇ. 14ರಷ್ಟು ಕಡಿತಮಾಡಿತು.

## ಬಿನ್ನಕ ಬಡ್ಡಿದರ : ಹಲವು ಸುಧಾರಣೆಗಳು

ಬಿನ್ನಕ ಬಡ್ಡಿದರ ಯೋಜನೆಯು ಸಾಧನೆಯನ್ನು ಸಮೀಕ್ಷಿಸಲು ಮತ್ತು ಸುಧಾರಣೆಗಳನ್ನು ಸೂಚಿಸಲು ಕೇಂದ್ರಸರ್ಕಾರ 1983ರಲ್ಲಿ ಕಾರ್ಯತಂಡವೊಂದನ್ನು ನೇಮಿಸಿತ್ತು. ಕಾರ್ಯತಂಡದ ಹಲವರು ಶಿಫಾರಸುಗಳಿಗೆ ಈಗ ಒಪ್ಪಿಗೆ ದೊರೆತಿವೆ. ಅವುಗಳಲ್ಲಿ ಮುಖ್ಯವಾದುವೆಂದರೆ :

1 ಬಡ್ಡಿದರ ಈಗಿರುವಂತೆಯೇ (ಶೇ. 4) ಮುಂದುವರಿಯುತ್ತದೆ. ಹಾಗೆಯೇ ನೀಡಬೇಕಾದ ಸಾಲಗಳ ಪ್ರಮಾಣವೂ ಹಿಂದಿನ ವರ್ಷದ ಒಟ್ಟು ಸಾಲದ ಶೇ. 1ರಷ್ಟು ಇರುತ್ತದೆ.

2 ಬಿನ್ನಕ ಬಡ್ಡಿದರ, ವಿದ್ಯಾವಂತ ಯುವಕರಿಗೆ ಸ್ವಯಂ ಉದ್ಯೋಗ ಯೋಜನೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ನಗರ ಪ್ರದೇಶ ಬಡವರಿಗೆ ಸ್ವಯಂ ಉದ್ಯೋಗ ಯೋಜನೆ ಪರಸ್ಪರ ಪ್ರತ್ಯೇಕವಾದುವಲ್ಲ ಅಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ನೆರವು ಪಡೆದವನಿಗೆ, ಬಿನ್ನಕ ಬಡ್ಡಿದರ ಯೋಜನೆಯಡಿ ಸಾಲ ದೊರೆಯುವುದಿಲ್ಲ.

3 ಕುಟುಂಬದ ವರಮಾನದ ಗರಿಷ್ಠ ಮಿತಿ ಗ್ರಾಮಾಂತರ ಪ್ರದೇಶದಲ್ಲಿ ಈಗಿರುವ ರೂ. 2,000ದಿಂದ ರೂ. 3,000ಗಳಿಗೂ, ಅರೆನಗರ ಮತ್ತು ನಗರ ಪ್ರದೇಶದಲ್ಲಿ ಈಗಿರುವ ರೂ. 6400ದಿಂದ ರೂ. 7,200ಕ್ಕೂ ಏರಿಸಲಾಗುವುದು.

With best compliments from

# M|s MUTHA DRESSES

**82/V, Tank Bund Road : BELLARY-583 101**

*Phone : 3817*



*Manufacturers of :*

**HALF PANTS**
**FULL PANTS**
**JEANS**
**TROUSERS. . .**

---

*With best compliments from*



# THE BELLARY DRESS MANUFACTURERS' ASSOCIATION

**Jain Market : BELLARY-583 101**

*President* : SRI SANKALCHAND C. KAWAD
*Vice-President* : SRI S. KRISHNA RAO
*Secretary* : SRI K. G. VINAYAK
*Joint-Secretary* : SRI D. TIRUPATI RAO
*Treasurer* : SRI P. S. RAJPUROHIT

*and All Members*

*With best compliments from*



Grams : 'BESTROL' Phone No. : 2359 and 3959

# M/s Bellary Steel Rolling Mills

**S. 890-Anantapura Road : BELLARY-583101**

*Manufacturers of*

**M. S. STRAIGHTENED ANGLES**
**25×25×3mm to 75×75×6mm**
**TESTED F.7B CHANNELS 75×40mm**
**100×50mm I.S.I. PLAIN ROUNDS**
**C.T.D. BARS, M.S. FLATS etc., etc.,**



Grams : 'BESTEEL' Phone Nos. 3654 and 2272

# M/s Bellary Steels & Alloys

*(MINI STEEL PLANT) LTD.,*

**S. 10/11, Anantapur Road : BELLARY-583 101**

*Manufacturers of*

**M. S. INGOTS M. S. BILLETS**

